# ಅಪರಂಜಿ

ತಿಳಿನಗೆಯ ಕಾರಂಜಿ



ಮೇ - 2011






ಬಿಡಿ ಪ್ರತಿ: ರೂ. 10.00

# ಅಪರಂಜಿ



ತಿಳಿನಗೆಯ ಕಾರಂಜಿ



ಸಂಪುಟ 28
ಸಂಚಿಕೆ - 8
ಮೇ - 2011



**ಚಂದಾ ವಿವರ:**
ಬಿಡಿ ಪ್ರತಿ: ರೂ. 10/-
ವಾರ್ಷಿಕ ಚಂದಾ: ರೂ. 100/-
ಹತ್ತು ವರ್ಷದ ಚಂದಾ: ರೂ. 750/-
ಕೆಲಸದ ವೇಳೆ:
ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ
ಮುದ್ರಣ: ರವಿ ಗ್ರಾಫಿಕ್ಸ್
ಅಕ್ಷರ ಜೋಡಣೆ:
ಒಮೇಗಾ ಲೇಸರ್ ಟೆಕ್

*ಈ ಸಂಚಿಕೆಯಲ್ಲಿ.....*



ಪ್ರಕಾಶಕರು: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ,
ಬೆಂಗಳೂರು - 560 003. email: aparanji@hotmail.com

ಸಂಪರ್ಕ ವಿಳಾಸ: **ಶ್ರೀ ಬೇಲೂರು ರಾಮಮೂರ್ತಿ**, ಉಪ ಸಂಪಾದಕರು, ಅಪರಂಜಿ ಮಾಸಪತ್ರಿಕೆ,
ನಂ. 96, 'ಸುಕೇಶವ' ಎರಡನೇ ಅಡ್ಡರಸ್ತೆ, 20ನೇ ಮುಖ್ಯರಸ್ತೆ, ಮೊದಲನೇ ಫೇಸ್, ಬಿ.ಟಿ.ಎಂ. ಲೇಔಟ್,
ಬೆಂಗಳೂರು - 560 068. ದೂರವಾಣಿ: 080-26688488. email: brmurthy@dataone.in

# ಅಪರಂಜಿ ಕಿಡಿ

● ಪ್ರಕಾಶ್



ನೈತಿಕ ಬಲದಿಂದ ಸರ್ಕಾರವನ್ನೇ ನಡುಗಿಸಿದ ''ಅಣ್ಣಾ'' ಹಜಾರೆಯವರಿಗೆ ಅಪರಂಜಿಯ ಧನ್ಯವಾದಗಳು.

★★★

ವಿಶ್ವಕಪ್ ಗೆದ್ದು ರಾರಾಜಿಸಿದ **Dhoni's angels** ಗೆಲ್ಲಾ ನಮ್ಮ ಅಭಿನಂದನೆಗಳು.

★★★

ಅಣ್ಣಾ ಹಜಾರೆಗೆ ಸಂಪೂರ್ಣ ಬೆಂಬಲ – ಮಾನ್ಯ ಮುಖ್ಯ ಮಂತ್ರಿಗಳು

**● ಅಣ್ಣಾ......ಬೆಚ್ಚಿಬಿದ್ದರಂತೆ !!**

★★★

ಸ್ವಾಮಿ ದೇವನೆ, ಲೋಕಪಾಲನೆ, ತೇ.......................

**● ಅಂತ ಧೈರ್ಯವಾಗಿ ಹಾಡಬಹುದು ಈಗ !!**

★★★

ಬ್ರಹ್ಮ ಬಂದರೂ ರಾಜ್ಯದ ನಾಯಕತ್ವ ಬದಲಾಗುವುದಿಲ್ಲ – ಹೇಳಿಕೆ

**● ಬ್ರಹ್ಮನಿಗೆ ಇದನ್ನ ತಿಳಿಸುವುದು ಸೂಕ್ತ !!**

★★★

ಕಾಮೆಡ್–ಕೆ ಕೌನ್ಸೆಲಿಂಗ್ ದಿಢೀರ್ ರದ್ದು – ಸುದ್ದಿ

**● ಇದೊಂದು ಕಾಮೆಡಿ ಆಗದಿದ್ದರೆ ಒಳಿತು !!**

★★★

''ಕೊಚ್ಚಿ ಹೋದ ಟಸ್ಕರ್ಸ್'' – ಕ್ರಿಕೆಟ್ ಸುದ್ದಿ

**● ಆಹಾ, ಶೀರ್ಷಿಕೆ ಅಂದರೆ ಹೀಗಿರಬೇಕು !!**

★★★




**ಮೊ**ನ್ನೆ ಒಂದು ಒಳ್ಳೇ ಪುಸ್ತಕ ಸಿಕ್ಕಿತ್ತೂರೀ ಓದುಕ್ಕೆ. 'ನೈನ್ ಲೈವ್ಸ್' ಎಂಬ ಈ ಪುಸ್ತಕದ ಲೇಖಕ ಇಂಗ್ಲೆಂಡಿನ ವಿಲಿಯಂ ಡಾಲ್ರಿಂಪಲ್.

ನಮ್ಮ ಇಂದಿನ ಭಾರತದಲ್ಲಿ ಅಧ್ಯಾತ್ಮದ ಹಾದಿಯನ್ನು ತುಳಿಯುತ್ತಿರುವ ಅನೇಕ ಯುವಕ, ಯುವತಿಯರ ಜೀವನಗಳನ್ನು ಮುತುವರ್ಜಿಯಿಂದ ಅಧ್ಯಯನ ಮಾಡಿ ಅದರಲ್ಲಿ ಒಂಭತ್ತು ಪ್ರಸಂಗಗಳನ್ನು ಆಯ್ದು ಪೋಣಿಸಿರುವ ಪ್ರಯತ್ನ ಈ ನೈನ್ ಲೈವ್ಸ್. ಈ ಪುಸ್ತಕದ ವಿಷಯ ಹೇಳುಕ್ಕೆ ಮುಂಚೆ ಈ ಡಾಲ್ರಿಂಪಲ್ ಮಹಾಶಯನನ್ನ ಹಿಂದೊಮ್ಮೆ ನಾನು ಇಂಗ್ಲೆಂಡಿನಲ್ಲಿ ಭೇಟಿಮಾಡಿದ್ದ ಪ್ರಸಂಗಾನ ಮೊದಲು ನಿಮಗೆ ತಿಳಿಸಿಬಿಡ್ತೇನೆ.

ಈ ಭೇಟಿಯ ಸಂದರ್ಭಾನ ಹಿಂದೊಮ್ಮೆ ಇಲ್ಲಿ ಪ್ರಸ್ತಾಪಿಸಿದ್ದ ನೆನಪು. ಆದರೆ ಡಾಲ್ರಿಂಪಲ್ ಬಗ್ಗೆ ಮಾತನಾಡುವಾಗ ಇಲ್ಲಿ ಪ್ರಸ್ತುತ ಅನ್ನಿಸಿದ್ದರಿಂದ ಅದನ್ನ ಪುನಃ ಹೇಳೋ ಧೈರ್ಯ ಮಾಡ್ತಾ ಇದ್ದೇನೆ. ಅಲ್ಲದೇ ನೇಮ್ ಡ್ರಾಪ್ ಮಾಡಿದ ಹಾಗೂ ಆಗುತ್ತೆ!

ಹಲವು ವರುಷಗಳ ಹಿಂದೆ ನಾನು ಇಂಗ್ಲೆಂಡಿಗೆ ಹೋಗಿದ್ದಾಗ ಈತನ ಹಿಂದಿನ ಪುಸ್ತಕ 'ದ ಲಾಸ್ಟ್ ಮೊಘಲ್' ನ ಬಿಡುಗಡೆ ಸಮಾರಂಭದಲ್ಲಿ ಭಾಗವಹಿಸುವ ಅವಕಾಶ ದೊರೆತಿತ್ತು. ಬೇಕ್‌ವೆಲ್ ಎಂಬ ಹಳ್ಳಿಯಲ್ಲಿನ ಪುಸ್ತಕದ ಮಳಿಗೆಯೊಂದರಲ್ಲಿ ಈ ಕಾರ್ಯಕ್ರಮವನ್ನು ಸಂಯೋಜಿಸಲಾಗಿತ್ತು. ಪುಸ್ತಕದ ಮಳಿಗೆಯ ಒಡತಿ, ಜೆರಲ್ಡೀನ್ ಹಾಗೂ ಅವಳ ಪತಿ ಶ್ರೀಧರ್ ನನ್ನನ್ನೂ ಈ ಸಂತೋಷದಲ್ಲಿ ಭಾಗಿಯಾಗಲು ಆಹ್ವಾನಿಸಿದ್ದರು. ಅವರ ಊರಿನ ಬಳಿಯಲ್ಲಿನ ಚೆಸ್ಟರ್‌ಫೀಲ್ಡ್ ಸ್ಟೇಷನ್ನಿನಲ್ಲಿ ನಾನು ಇಳಿದಾಗ ಸಂಜೆಯಾಗುತ್ತಾ ಬಂದಿತ್ತು. ದಂಪತಿಗಳಿಬ್ಬರೂ ನನ್ನನ್ನು ಇದಿರುಗೊಳ್ಳಲು ಬಂದಿದ್ದರು. ಎತ್ತರದ ನಿಲುವು, ತೆಳುವಾದ ದೇಹಮಾಟ, ಕಪ್ಪು ಬಣ್ಣದ ಜೀನ್ಸ್ ಮತ್ತು ಅದೇ ಬಣ್ಣದ ಟೀಷರ್ಟ್ ಧರಿಸಿದ್ದ ಶ್ರೀಧರ್, ಕೆದರುಕೇಶಿ. ಹೆಗಲಿಗೆ ಒಂದು ತೂಗುಚೀಲ ತಗುಲಿಸಿಬಿಟ್ಟರೆ ಸಾಕು ಥೇಟ್ ಬಂಡಾಯ ಕವಿ. ಹೊನ್ನಗೂದಲಿನ, ತುಟಿಯಂಚಿನಲ್ಲಿ ಸದಾ ನಗೆ ಸೂಸುತ್ತಿದ್ದ ಪುಟ್ಟ ಮೈಕಟ್ಟಿನ ಜೆರಲ್ಡೀನ್, ಗಂಡನ ಭುಜದ ಮಟ್ಟಕ್ಕೂ ಬರಲಾರಳು.

'ಷೀ ಕೂಮರ್, ಶ್ರೀ ಪುಸ್ತಕದ ಅಂಗಡಿಯಲ್ಲಿ ಇಳಿದುಕೊಳ್ಳುತ್ತಾನೆ. ನಾಳಿನ ಸಮಾರಂಭಕ್ಕೆ ಇನ್ನೂ ತುಂಬಾ ಕೆಲಸ ಬಾಕಿ ಇದೆ. ನೀನು ನನ್ನೊಂದಿಗೆ ಮನೆಗೆ ಬಂದು ಟೀ ಕುಡಿದ ನಂತರ ಪುನಃ ಇಲ್ಲಿಗೆ ಬಂದರೆ ಆಗಬಹುದು ತಾನೆ ?' ಅಂತ ಜೆರಲ್ಡೀನ್ ಹೇಳಿ ನನ್ನ ಸಮ್ಮತಿ ಪಡೆದ ನಂತರ ನಾವೆಲ್ಲರೂ ಕಾರಿನಲ್ಲಿ ಕುಳಿತು ಬೇಕ್‌ವೆಲ್ ಹಾದಿ ಹಿಡಿದೆವು. ಸ್ವಲ್ಪ ಸಮಯದಲ್ಲೇ ನಮ್ಮ ಹಾದಿ ಊರನ್ನು ಬಿಟ್ಟು ಹೊಲಗಳ ಮಧ್ಯೆ ಸಾಗಿತ್ತು. ನೆಲದ ಮಟ್ಟದಲ್ಲಿ ಕಗ್ಗತ್ತಲು ಆವರಿಸಿದ್ದರೂ ಆಗಸ ಇನ್ನೂ ಕಡುನೀಲಿ ಛಾಯೆಯನ್ನು ಧರಿಸಿತ್ತು. ದೂರದ ಗುಡ್ಡವೊಂದರ ಮೇಲೆ ಮಣಿ ಮಣಿಯಾಗಿ ಸಾಲುಗಟ್ಟಿ ನಿಂತಿದ್ದ ದೀಪಗಳು ಕಂಡವು. 'ಅದೇ

ಬೇಕ್‌ವೆಲ್. ಅಲ್ಲೇ ನಮ್ಮ ಮಳಿಗೆ ಇರೋದು' ಎಂದು ಶ್ರೀಧರ್ ವಿವರಿಸಿದ. ಈ ಪುಸ್ತಕದ ಮಳಿಗೆಯ ಕಟ್ಟಡ ಹಿಂದೆ ಒಂದು ರೇಲ್ವೇ ಸ್ಟೇಷನ್ ಆಗಿತ್ತಂತೆ. ಕನಿಷ್ಠಮಟ್ಟದ ಪ್ರಯಾಣಿಕರಿಲ್ಲದ ಕಾರಣ ಇಲ್ಲಿನ ಸ್ಟೇಷನ್ನನ್ನು ಮುಚ್ಚುವ ಸಂದರ್ಭ ಬಂದಾಗ ಬಹು ಅಗ್ಗದ ಬೆಲೆಯಲ್ಲಿ ಇದನ್ನು ಖರೀದಿಸಿದರಂತೆ. ಮೇಲು ನೋಟಕ್ಕೆ ನಮ್ಮ ಕಂಟೋನ್ಮೆಂಟ್ ಸ್ಟೇಷನ್ ಐವತ್ತರ ದಶಕದಲ್ಲಿ ಕಾಣುತ್ತಿದ್ದ ಹಾಗೆ ಇತ್ತು ಈ ಪುಸ್ತಕದ ಅಂಗಡಿ.

ಮಾರನೆಯ ದಿನದ ಸಮಾರಂಭದಲ್ಲಿ ವಿಲಿಯಂನ ಪುಸ್ತಕದ ಜೊತೆಗೆ ನಿಕ್ ರಾಬಿನ್‌ಸನ್ ಬರೆದಿದ್ದ 'ದ ಕಾರ್ಪೊರೇಶನ್ ದಟ್ ಚೇಂಜ್ಡ್ ದ ವರ್ಲ್ಡ್' ಎಂಬ ಪುಸ್ತಕವೂ ಬೆಳಕು ಕಾಣುವದಿತ್ತು. ಈ ಪುಸ್ತಕ ಈಸ್ಟ್ ಇಂಡಿಯಾ ಕಂಪನಿಯ ದೌರ್ಜನ್ಯಗಳನ್ನು ದಾಖಲಿಸುವ ಒಂದು ಯತ್ನ. ಕಾರ್ಯಕ್ರಮ ಪ್ರಾರಂಭವಾಗುವುದಕ್ಕೆ ಮುಂಚೆ ಅಲ್ಲಿ ನೆರೆದಿದ್ದ ಸಭಿಕರಲ್ಲಿ ಶ್ರೀಧರನನ್ನು ಬಿಟ್ಟರೆ ನಾನೊಬ್ಬನೇ ಭಾರತೀಯ. ಬಿಡುಗಡೆಯಾಗುತ್ತಿದ್ದ ಎರಡು ಪುಸ್ತಕಗಳೂ ಭಾರತದ ಹಿನ್ನೆಲೆಯನ್ನು ಹೊಂದಿದ್ದರಿಂದ ಸಹಜವಾಗಿಯೇ ನನಗೆ ಇಬ್ಬರೂ ಮುಖ್ಯ ಅತಿಥಿಗಳ ಪರಿಚಯ ಮಾಡಿಕೊಳ್ಳುವುದು ಸುಲಭವಾಯಿತು. ನಿಕ್ ಮತ್ತು ವಿಲಿಯಂ ಇಬ್ಬರೂ ಭಾರತದ ಬಗ್ಗೆ ನಿಕಟ ಪರಿಚಯ ಹಾಗೂ ಅಭಿಮಾನ ಉಳ್ಳವರು. ವಿಲಿಯಂ ತನ್ನ ಪುಸ್ತಕಗಳ ಹಿನ್ನೆಲೆಗಾಗಿ ತಾನು ಮಾಡಿರುವ ವ್ಯಾಪಕ ಸಂಶೋಧನೆಯ ಬಗ್ಗೆ ನನಗೆ ತಿಳಿಸಿದ. ಅನಂತರದ ಸಮಾರಂಭವೂ ಅಚ್ಚುಕಟ್ಟಾಗಿಯೇ ನಡೆಯಿತು ಅನ್ನಿ.

'ನೈನ್ ಲೈವ್ಸ್' ಪುಸ್ತಕದಲ್ಲಿ ವಿಲಿಯಂ ಆರಿಸಿಕೊಂಡಿರುವ ಪಾತ್ರಗಳು ಬಹು ವೈವಿಧ್ಯಮಯ. ಶ್ರವಣಬೆಳಗೊಳದಲ್ಲಿರುವ ಒಬ್ಬ ಮಹಿಳಾ ಜೈನ ಮುನಿವರ್ಯೆ, ಕೇರಳದ ಥೆಯ್ಯಂ ನರ್ತಕ, ಸವದತ್ತಿಯ ದೇವದಾಸಿ, ರಾಜಾಸ್ತಾನದ ಫಾಡ್ ಗಾಯಕ, ಬಂಗಾಳದ ರುದ್ರಭೂಮಿಗಳಲ್ಲಿ ನೆಲೆಸಿರುವ ಕಪಾಲಿಕರು ಹೀಗೆ ಭಾರತದ ಉದ್ದಗಲದಲ್ಲಿ ಹರಡಿರುವ ವಿವಿಧ ಧರ್ಮಗಳ, ನಂಬಿಕೆಗಳ ಅನುಯಾಯಿಗಳನ್ನ, ಭಕ್ತರನ್ನ ಸಂದರ್ಶಿಸಿ ಅವರ ಕತೆಗಳನ್ನ ವಿಲಿಯಂ ಈ ಪುಸ್ತಕದಲ್ಲಿ ಬಹು ಕುಶಲತೆಯಿಂದ ಚಿತ್ರಿಸಿದ್ದಾನೆ. ನನಗೆ ಖುಷಿಕೊಟ್ಟ ಒಂದು ಪ್ರಸಂಗವೆಂದರೆ 'ದ ರೆಡ್ ಫೇರಿ'.

ಸಿಂಧ್ ಪ್ರಾಂತದಲ್ಲಿನ ಒಂದು ಸೂಫಿ ದರ್ಗಾದಲ್ಲಿ ನಮ್ಮ ಲೇಖಕ ಲಾಲ್ ಪೆರಿ ಅಥವಾ ರೆಡ್ ಫೇರಿಯನ್ನು ಭೇಟಿ ಮಾಡುತ್ತಾನೆ. ಈ ಮಧ್ಯ ವಯಸ್ಸಿನ ಸೂಫಿ ಸಂತಳು ಹುಟ್ಟಿನಿಂದ ಬಿಹಾರದವಳು. ತೀವ್ರ ಬಡತನದಲ್ಲಿ ಹುಟ್ಟಿ, ಪೂರ್ವ ಪಾಕಿಸ್ತಾನಕ್ಕೆ ವಲಸೆ ಹೋಗಿ, ಅಲ್ಲಿ ಬಿಹಾರೀ ಮೂಲದವಳೆಂಬ ಕಾರಣದಿಂದಾಗಿ ಚಿತ್ರಹಿಂಸೆ ಅನುಭವಿಸಿ, ಬಾಂಗ್ಲಾದೇಶ ರೂಪುಗೊಂಡನಂತರ ಸಿಂಧ್ ಪ್ರಾಂತಕ್ಕೆ ನಿರಾಶ್ರಿತಳಾಗಿ ಹೋಗಿ ಕೊನೆಗೆ ಅಲ್ಲಿ ಷಾಬಾಜ್ ಖಲಂದರ್ ದರ್ಗಾದಲ್ಲಿ ಆಶ್ರಯ, ಶಾಂತಿ, ನೆಮ್ಮದಿಗಳನ್ನು ಕಾಣುತ್ತಾಳೆ. ಇಂದಿನ ಪಾಕಿಸ್ತಾನದಲ್ಲಿ ಹೊಸದಾಗಿ ತಲೆಯೆತ್ತುತ್ತಿರುವ ವಹಾಬಿ ಪಂಥೀಯರು ಸೂಫಿಗಳನ್ನ ಕಡೆಗಾಣಿಸಿ, ಅವರನ್ನು ನಿರ್ನಾಮಗೊಳಿಸುವ ಹವಣಿಕೆಯಲ್ಲಿರುವುದರ ಬಗ್ಗೆ ಮಾತನಾಡುತ್ತಾ ಲಾಲ್ ಪೆರಿ,

'ನಿಜವಾದ ಜಿಹಾದ್ ಎಲ್ಲಾ ಕಾಲಕ್ಕೂ ಮನುಷ್ಯನ ಹೃದಯದೊಳಗೆ ನಡೆಯುವ ಕಾಳಗ. ಈ ಸತ್ಯವನ್ನು ಅರಿಯದೇ, ಇಂದಿನ ಜೀಹಾದಿಗಳು ಕತ್ತಿಯಿಂದ ಈ ಕಾಳಗವನ್ನು ನಡೆಸಲು ಹವಣಿಸಿದ್ದಾರೆ. ಜಯವನ್ನು ಸಾಧಿಸಬೇಕಾದದ್ದು ನಮ್ಮ ಒಳಗಿನ ಆಸೆ, ಅಸೂಯೆ ಮುಂತಾದ ಶತ್ರುಗಳನ್ನ ಕೊಲ್ಲಬೇಕಾದದ್ದು ನಮ್ಮ ಅಹಂಕಾರವನ್ನ, ಕಾಫಿರರನ್ನಲ್ಲ' ಎನ್ನುತ್ತಾನೆ.

ಈ ಸಂಭಾಷಣೆ ಲಾಲ್ ಪೆರಿಯ ಪರಿಚಿತನಾದ ಸೈನ್ ಫಕೀರ್‌ನ ಮನೆಯಲ್ಲಿ ನಡೆಯುತ್ತಿರುತ್ತದೆ. ಫಕೀರನ ಮನೆಯಲ್ಲಿನ ಹುಡುಗನೊಬ್ಬ ಅತಿಥಿಗಳಿಗೆ ಹಸಿರು ಟೀ ತುಂಬಿದ ಬಟ್ಟಲುಗಳನ್ನು ತರುತ್ತಾನೆ. ಹೊರಗೆ ಮರುಭೂಮಿಯ ಉರಿಬಿಸಿಲಿದ್ದರೂ ಗುಡಿಸಲಿನ ಛಾವಣಿಯ ತಂಪು ನೆರಳಿನ ಆಶ್ರಯ ಹಿತವೆನಿಸುತ್ತಿರುತ್ತದೆ. ಲಾಲ್ ಪೆರಿ ಮುಂದುವರೆದು,

'ನಮ್ಮ ಸೈನ್ ಫಕೀರರ ತಂದೆ ನನಗೆ ಯಾವಾಗಲೂ ಹೇಳುತ್ತಿದ್ದ ಕಥೆಯೊಂದು ನನಗೆ ನೆನಪಿಗೆ ಬರುತ್ತಿದೆ. ಒಮ್ಮೆ ಮರುಭೂಮಿಯಲ್ಲಿ ಲಾಲ್ ಷಾಬಾಜ್ ತಮ್ಮ ಗೆಳೆಯ ಷೇಕ್ ಜಕಾರಿಯಾ ಅವರೊಂದಿಗೆ ಓಡಾಡುತ್ತಿದ್ದರಂತೆ. ಆಗ ಛಳಿಗಾಲವಾದ್ದರಿಂದ ಸಂಜೆಯಾಗುತ್ತಾ ಬಂದಂತೆ ಅವರಿಬ್ಬರೂ ಬೆಚ್ಚಗಿರಲು ಒಂದು ಬೆಂಕಿಯನ್ನು ಹೂಡಲು ಆಲೋಚಿಸಿದರಂತೆ. ಸುತ್ತಮುತ್ತ ಒಣಗಿದ ಕಡ್ಡಿಗಳೇನೋ ಹೇರಳವಾಗಿ ಸಿಕ್ಕವಂತೆ. ಅವುಗಳನ್ನು ಒಟ್ಟುಗೂಡಿಸಿದ ಮೇಲೆ, ಅವನ್ನು ಹಚ್ಚಲು ಬೆಂಕಿ ಬೇಕಲ್ಲಾ, ಆಗ ಜಕಾರಿಯಾ, ಷಾಬಾಜ್‌ರನ್ನು ಕುರಿತು, 'ನೀನು ಒಂದು ಗಿಡುಗನ ರೂಪ ಧರಿಸಿ ಈಗಲೇ ನರಕಕ್ಕೆ ಹಾರಿಹೋಗಿ ಒಂದಿಷ್ಟು ಬೆಂಕಿಯನ್ನು ತಾ' ಎಂದು ಕೇಳಿಕೊಂಡನಂತೆ. ಷಾಬಾಜ್ ತನ್ನ ಗೆಳೆಯನ ಆಣತಿಯಂತೆಯೇ ಹಾರಿಹೋಗಿ ಸಲ್ಪ ಸಮಯದನಂತರ ಬರಿಗೈಯ್ಯಲ್ಲಿ ಹಿಂತಿರುಗಿದನಂತೆ. ಗೆಳೆಯನ ಪ್ರಶ್ನಾರ್ಥಕ ಮುಖವನ್ನು ನೋಡಿ ಷಾಬಾಜ್, 'ನರಕದಲ್ಲಿ ಬೆಂಕಿಯೆಂಬುದೇ ಇಲ್ಲ. ಅಲ್ಲಿಗೆ ಹೋಗುವವರೆಲ್ಲರೂ ತಮ್ಮ ತಮ್ಮ ಹೃದಯಗಳಲ್ಲಿ ಅಡಗಿಸಿಟ್ಟುಕೊಂಡಿರುವ ಅಸೂಯೆ, ಕ್ರೋಧದ ಬೆಂಕಿಗಳನ್ನು ತಾವೇ ತರಬೇಕೆಂಬುದು ಅಲ್ಲಿನ ನಿಯಮ' ಎಂದನಂತೆ – ಎಂದು ದಾಖಲಿಸುತ್ತಾರೆ.




**ಶಿವಕುಮಾರ್**

# ತುಂಗಭದ್ರೆ

**- ಕೆ.ಎಸ್. ನರಸಿಂಹಸ್ವಾಮಿ**

"**ಈ** ತುಂಗಭದ್ರೆ ಹೊಳೆಯಲ್ಲ, ವರುಷದ ಮಗಳು...."

ನಮ್ಮ ತುಂಗಭದ್ರೆ ಹುಟ್ಟಿದ ಮೇಲೆ ನನ್ನ ಮನೋಧರ್ಮವೇ ಬದಲಾಯಿಸಿದೆ. ಒಂದು ಕಾಲದಲ್ಲಿ ನನ್ನ ಮನಸ್ಸಿನಲ್ಲಿ ಒಂದು ಬಗೆಯ ಸಿಡುಕು ಅಬ್ಬರಗಳ ಸಿಡಿಲು ಮಿಂಚುಗಳು ಹೆಡೆಯಾಡುತ್ತಿದ್ದವು; ಮಾತು ಮಳೆಯಂತೆ ಸುರಿಯುತ್ತಿತ್ತು. ಅದೊಂದು ಬಾಳಿನ ಮಳೆಗಾಲ. ಅದನ್ನು ದಾಟಿದ ಮೇಲೆ ಹಿಂದೆ ಆದುದನ್ನೆಲ್ಲ ನೆನೆದರೆ ಈಗ ನನಗೇ ನಗುಬರುತ್ತದೆ. ಒಂದು ವೇಳೆ ನಾನು ಅದನ್ನೆಲ್ಲ ಮರೆತವನಂತೆ ಸುಮ್ಮನಿದ್ದೇನು! ಆದರೆ ಈ ಮೀನಾಕ್ಷಿ – ಸರ್ವಸಾಕ್ಷಿ – ಒಂದೊಂದು ಸಲ ಅರಿತೋ ಅರಿಯದೆಯೋ 'ಏನ್ರಿ ನೀವು ಹೀಗಿರಲಿಲ್ಲವಲ್ಲ? ಈಗೇನೋ ನನ್ನ ಪುಣ್ಯ!' ಎಂದು ಹಳೆಯ ದಿನಗಳನ್ನು ಮಗುಚಿಹಾಕುವಾಗ ನನ್ನ ಜೀವ ಜಿಲ್ಲೆನ್ನುತ್ತದೆ. ಉಪಕಾರಿಗಳು ತಾವು ಮಾಡಿದ್ದನ್ನು ಆಡಬಾರದು ಎನ್ನುವುದು ಲೋಕನೀತಿ, ಇದು ಅಪಕಾರಿಗಳಿಗೂ ಅನ್ವಯಿಸುತ್ತದೆ. ನಾನು ಆಡಿದ್ದು ಮಾಡಿದ್ದು ಏನೇನಿವೆಯೋ? ಅವೆಲ್ಲ ಹೊಸಿಲ ಒಳಗಿದ್ದರೇ ಚೆನ್ನು ಎಂದು ನಾನು ಬಿಗಿ ಹಿಡಿದರೆ, ನಮ್ಮ ತುಂಗಭದ್ರೆ ಹೊಸಿಲ ದಾಟಿದ ದಿನವೇ ನನ್ನ ಅಂತರಂಗದ ನೆಳಲು ಬೆಳಕೆಲ್ಲ ಬೀದಿಗೆ ಬಂದದ್ದು ನನಗೆ ಇಷ್ಟವಿಲ್ಲ.

ಸಂಸಾರ ಹೂಡಿದ ಮೊದಲಲ್ಲಿ ಆ ಕಾಲ ಚೆನ್ನಾಗಿತ್ತು – ನನಗಾಗಲಿ ನನ್ನವಳಿಗಾಗಲಿ ನನ್ನ ಸರ್ವಾಧಿಕಾರದ ರೂಪರೇಖೆಗಳು ಗೊತ್ತಾಗಲಿಲ್ಲ. ನಾನು ಹೇಳಿದಂತೆ ಆಕೆ ನಡೆದುಕೊಂಡಳು. ನನ್ನ ಅಭಿರುಚಿ ಅಭಿಪ್ರಾಯಗಳನ್ನೇ ಸಮರ್ಥಿಸಿದಳು. ನಾವು ಮುಖ್ಯವಾಗಿ ಪುಣ್ಯಶಾಲಿಗಳು. ಗಂಡನನ್ನು ದೇವರು ಎಂದು ಭಾವಿಸಬೇಕು ಎಂದು ಹೆಣ್ಣಿಗೆ ಸದಾಕಾಲ ಉಪದೇಶ ಮಾಡಿದ ಮೇಲೆ, ಆ ಗಂಡ ದೇವರಲ್ಲ ಎನ್ನುವ ಪ್ರತಿಕೂಲಭಾವನೆ ಹೆಣ್ಣಿನ ಮನಸ್ಸನ್ನು ಆಕ್ರಮಿಸಿಕೊಳ್ಳಲು ಸ್ವಲ್ಪಕಾಲ ಬೇಕಾಗುತ್ತದೆ. ಆ ನಡುಗಾಲದಲ್ಲಿ ಪ್ರೇಮದ ವಸಂತೋದ್ಯಾನ ಮಿಂಚುತ್ತದೆ. ಆಗ ಅರಳದ ಹೂವಿಲ್ಲ; ಹಾಡದ ಹಕ್ಕಿಯಿಲ್ಲ. ನಾನು ಅಹಿಂಸೆಯನ್ನು ಆಚರಣೆಗೆ ತಂದಿದ್ದರೂ, ಆಕೆಯನ್ನು ರಕ್ಷಿಸುವ ಭಾರ ನನ್ನದೆನ್ನುವ ಗೌರವದ ಪ್ರಭಾವದಿಂದಲೋ ನನ್ನ ಪ್ರೇಮದ ಅನಂತ ಭಾಗ್ಯವೇ ಆಕೆಗೆ ಸಾಕಾದೀತು ಎನ್ನುವ ಅಂದಾಜಿನಿಂದಲೋ ಆಕೆಯ ಅಭಿಪ್ರಾಯಗಳಿಗೆ ಮನ್ನಣೆಕೊಡುವ ಅಗತ್ಯ ನನಗೆ ತೋರಲಿಲ್ಲವೆಂದೇ ಒಪ್ಪಿಕೊಳ್ಳುತ್ತೇನೆ. ಒಳ್ಳೆಯ ಸಂಪ್ರದಾಯವನ್ನನುಸರಿಸಿದಾಗಲೂ ಹೀಗಾದರೆ ಏನು ಗತಿ? ನಮ್ಮ ತುಂಗಭದ್ರೆ ಹುಟ್ಟಿದ ಮೇಲೆ ಮೀನಾಕ್ಷಿಯ ಮನಸ್ಸು ನದಿಯಂತೆ ಕವಲೊಡೆದು ಒಂದು ಸಂತೋಷದ ದ್ವೀಪವನ್ನು ಕಟ್ಟಿಕೊಂಡು ಮಗುವನ್ನು ಕಣ್ಮನಗಳ ಕಾವಲಿನಲ್ಲಿ ಅಲ್ಲಿಟ್ಟು ತೂಗಿಕೊಳ್ಳುತ್ತಿರುವುದನ್ನು ನಾನು ನೋಡುತ್ತಿದ್ದೇನೆ. ತನ್ನ ಮಗು ತನಗಿಂತ ಚೆಲುವಾಗಿರುವುದನ್ನು ಕಂಡು ಆಕೆ ಹಿಗ್ಗುತ್ತಾಳೆ. ಇದು ನಿಮ್ಮ ಮಗು ಎಂದು

ಅದನ್ನು ನನ್ನ ಕಡೆ ತಳ್ಳುತ್ತಾಳೆ. 'ನನ್ನ ಚಿನ್ನ' ಎಂದು ಅದನ್ನು ಮತ್ತೆ ಕಸಿದುಕೊಳ್ಳುತ್ತಾಳೆ. ಈ ನಡವಳಿಕೆಯ ಹಿಂದೆಲ್ಲ ಮಾತಿಗೆ ನಿಲುಕದ ಭಾವ ಸಂಚಾರವಿದೆ. ಒಬ್ಬಳೇ ಬೀದಿಯಲ್ಲಿ ಓಡಾಡುತ್ತಿದ್ದವಳ ತೋಳಿನ ಬಳಸಿನಲ್ಲಿ ಈ ಮಗು ನಕ್ಷತ್ರದಂತೆ ಮಿನುಗುತ್ತಿದೆ. ನನಗೆ ನನ್ನ ಸಂಸಾರ ಹೊರೆಯಲ್ಲ; ಆಕೆಗೆ ತನ್ನ ಮಗು ಭಾರವಲ್ಲ. ಆಕೆಯ ಚೆಲುವಿಗೆ ಒಲಿದಿದ್ದ ನನ್ನ ಮನಸ್ಸು, ಈಗ ಆಕೆಯ ಸಂತೋಷಕ್ಕೆ ಬೆರಗಾಗಿದೆ.

ನಮ್ಮ ತುಂಗಭದ್ರೆ, ಸುಮ್ಮನಿರುವ ಮಗಳಲ್ಲ. ಒಂದು ಕಾಲದಲ್ಲಿ ನನ್ನ ಕೋಣೆಯಲ್ಲಿ ವ್ಯವಸ್ಥೆಯಿತ್ತು. ಪುಸ್ತಕಗಳು, ಕಾಗದ, ಪೆನ್, ಪೆನ್‌ಸಿಲ್, ದೀಪ, ಕನ್ನಡಿ ಎಲ್ಲಿ ಬಿದ್ದಿದ್ದರೆ ಅಲ್ಲೇ ಬಿದ್ದಿರುತ್ತಿದ್ದುವು. ನಾನು ಪದ್ಯ ಬರೆಯಲು ಯಾವ ಆತಂಕವೂ ಇರಲಿಲ್ಲ. ಗದ್ಯ ಬರೆದರೂ ಬೇಡ ಎನ್ನುವ ದೈವವಿರಲಿಲ್ಲ. ಆ ಕಾಲದಲ್ಲಿ ಕಾದಂಬರಿ ಬರೆಯುವ ಮನಸ್ಸು ಬಂದಿದ್ದರೆ ಆ ಕೆಲಸವನ್ನೂ ಮಾಡಿ ಮುಗಿಸಿ ಕನ್ನಡದ ಸೇವೆಯನ್ನು ಮಾಡಬಹುದಾಗಿತ್ತು! ಆದರೆ ಈಗ? ಗದ್ಯ ಓಡಿಹೋಯಿತು; ಕಾದಂಬರಿಯ ಕಾಟವಿಲ್ಲ. ಪದ್ಯ ಬರೆಯುವುದೂ ತುಂಬ ಕಷ್ಟವಾಗಿದೆ. ಮನಸ್ಸಿಗೆ ಸಂತೋಷ ಒದಗಿದೆ; ಆದರೆ ವಿರಾಮಕ್ಕೆ ಪೂರ್ಣ ವಿರಾಮ. ಬಾಗಿಲು ಹಾಕಿಕೊಂಡು ಬರೆಯುವುದಕ್ಕೆ ಕುಳಿತರೆ, ಈ ಮಗಳು ಬಿರುಗಾಳಿಯಂತೆ ಆಗಾಗ ಒಳಕ್ಕೆ ನುಗ್ಗುತ್ತಾಳೆ. ನನ್ನ ಪೂಜ್ಯ ವಸ್ತುಗಳೆಲ್ಲ ಇವಳಿಗೆ ಆಟದಬೊಂಬೆಗಳಾಗಿವೆ. 'ಅಶ್ವತ್ಥಾಮನ್' ರುದ್ರನಾಟಕದ ಪುಸ್ತಕವನ್ನು ತೆರೆದುನೋಡಿ. ಅದರ ಪರಿಸ್ಥಿತಿ ರುದ್ರವಾಗಿಯೇ ಇದೆ. ಗೋಕಾಕರ 'ಸಮುದ್ರ ಗೀತೆಗಳು' ನೀರು ಪಾಲಾಗಿವೆ. 'ದೀಪದಮಲ್ಲಿ' ಎಣ್ಣೆಯನ್ನು ಕುಡಿದಿದೆ. ನನ್ನ ಹೊಸ ಹಾಡುಗಳ ಮೈ ಮೇಲೆಲ್ಲ ತುಂಗಭದ್ರೆಯ ಬಗೆ ಬಗೆಯ ಅಲಂಕಾರಗಳು. ಇನ್ನು ಯಾರಾದರೂ ಈ ಕೆಲಸವನ್ನು ಮಾಡಿದ್ದರೆ–ಕಡೆಗೆ ಮೀನಾಕ್ಷಿಯೇ ಹೀಗೆ ಮಾಡಿದ್ದರೂ ಸರಿಯೆ, ನನ್ನ ರೋಷಪ್ರಳಯದಲ್ಲಿ ಅವರು ತೇಲಿಹೋಗುತ್ತಿದ್ದರು. ಆದರೆ ಈ ತುಂಗಭದ್ರೆಯ ಮಂದಹಾಸದಲ್ಲಿ ಯಾವ ಕವಿಗೂ ನಿಲುಕದ ಕಾವ್ಯವಿದೆ. ಅವಳ ಅಳುವಿಗೂ ನಗುವಿಗೂ ನಡುವೆ ಒಂದು ಕೂದಲೆಳೆಯಷ್ಟೇ ಅಂತರ. ಆ ಅಂತರವನ್ನು ಕಾಪಾಡುವುದೇ ನನ್ನ ಭಾರವಾಗಿದೆ.

ನನ್ನ ಹಟ ಈಗೇನೋ ನಡೆಯುವಂತಿಲ್ಲ. ಮಗು ಹಟ ಹಿಡಿದರೆ ಅವಳನ್ನು ಸುಮ್ಮನಾಗಿಸುವ ಕರ್ತವ್ಯ ನನ್ನ ಪಾಲಿಗೆ ಬಂದಿದೆ. ಮೀನಾಕ್ಷಿಯ ಮನಸ್ಸು ಮಗಳ ಮೇಲೆ ತುಂಬಿಕೊಂಡಿದ್ದರೂ, ಆಕೆಗೆ ಮನೆಗೆಲಸ ಸಾಕಾದಷ್ಟಿದೆ. ಅದೂ ಅಲ್ಲದೆ ಆಕೆಗೆ ಆಲಸ್ಯವಾದರೆ ಆ ಕೆಲಸವು ನನಗೆ ಬಿದ್ದೀತೆನ್ನುವ ಭಯದಿಂದ, ಮಗುವನ್ನು ತಡೆಯುವ ಕೆಲಸವನ್ನು ನಾನು ಸುಮ್ಮನೆ ಒಪ್ಪಿಕೊಂಡಿರುತ್ತೇನೆ. ನಾನು ಮನೆಯಲ್ಲಿ ತಾನೆ ಹಗಲೆಲ್ಲ ಇರಬೇಕಾಗಿದೆಯೇ? ಬೆಳಗಾಗ ಹತ್ತು ಗಂಟೆಗೆ ಮನೆಯನ್ನು ಬಿಟ್ಟರೆ ಮತ್ತೆ ಗೃಹಪ್ರವೇಶ ರಾತ್ರಿ ಸರಿಹೊತ್ತಾದರೂ ಆದೀತು. ಭಾನುವಾರ, ರಜಾದಿನಗಳು ಮತ್ತು ಉಳಿದ ಕೆಲವು ದಿನಗಳಲ್ಲಿ ಬೆಳಗಿನ ಹೊತ್ತು ನನಗೆ ತುಂಗಭದ್ರೆಯನ್ನು ತಡೆಯುವ ಕೆಲಸ ಒದಗುತ್ತದೆ. ಹೀಗೆ ಅಗತ್ಯವಾಗಿ ಒದಗಿದ ಸ್ನೇಹ ಅಸಾಧ್ಯವಾಗಿ ಬೆಳೆಯುತ್ತಿದೆ. ಅವಳು ಕರ್ಪೂರದ ಬೊಂಬೆಗೆ ಕಥೆ ಹೇಳುತ್ತಾಳೆ; 'ಭಾಗ್ಯದ ಲಕ್ಷ್ಮಿ ಬಾರಮ್ಮ' ಎನ್ನುವ ಹಾಡನ್ನು ಮುದ್ದಾಗಿ ಹಾಡುತ್ತಾಳೆ, 'ಎಂ.ಬಿ.ಬಿ.ಎಸ್. ಓದುತ್ತೇನೆ;

ಗಂಡ ಬೇಡ' ಎನ್ನುತ್ತಾಳೆ. ನನ್ನ ಪಠದ ಮುಂದೆ ದೀಪ ಇಟ್ಟು 'ಗ್ರೀಕಿ'ನಲ್ಲಿ ಭಜನೆ ಮಾಡುತ್ತಾಳೆ. ಅಲ್ಲದೆ ಇತ್ತೀಚೆಗೆ ನನ್ನನ್ನು ಹೆಸರು ಹಿಡಿದು ಕೂಗುತ್ತಾಳೆ. ಅವಳು ಏನು ಮಾಡಿದರೂ ಸರಿಯೇ, ಚೆನ್ನೇ. ಅವಳ ಮನಸ್ಸು ನನಗೆ ಅರ್ಥವಾಗುತ್ತದೆ; ಅವಳ ಮಾತು ಅಸ್ಪಷ್ಟವಾದರೂ ಅರ್ಥದ ಹತ್ತಿರವೇ ಸುಳಿಯುತ್ತದೆ. ಅವಳು ಕಟ್ಟುವ ಆವರಣದಲ್ಲಿ ನಿರ್ಮಲವಾದ ಸ್ವಪ್ನ ಸರೋವರಗಳಿವೆ; ಅವಳ ಭಾಷೆಯಲ್ಲಿಯೇ ಉತ್ತರ ಕೊಟ್ಟರೆ ಸಂತೋಷದಿಂದ ಅವಳ ಕಣ್ಣುಗಳು ಮಿಂಚುತ್ತವೆ. ತಾಯಿಯ ಮುಂದೆ ತಂದೆ ಹಿಂದೆ ಓಡಾಡಿ ನಾವು ಎಂಥ ಜನ ಎಂಬುದು ಅವಳಿಗೂ ತಿಳಿಯುತ್ತ ಬಂದಿರಬೇಕು. ನಾವು ಆಡಿದ್ದನ್ನೆಲ್ಲ ಅವಳೂ ನುಡಿದುಬಿಟ್ಟಾಳೆಂದು ನಾವೂ ಜಾಗರೂಕತೆಯಿಂದ ನಡೆದುಕೊಳ್ಳುವ ಸಂದರ್ಭ ಒದಗಿದೆ.

ಹಿಂದೆಲ್ಲ ನಾನು ಪದ್ಯ ಏಕೆ ಬರೆದೆನೋ ನಾನು ಹೇಳಲಾರೆ. ಈಗ ನಮ್ಮ ತುಂಗಭದ್ರೆಗೆ ನಿದ್ದೆಯನ್ನು ತರುವುದಕ್ಕೆ ಮಾತ್ರ ಪದ್ಯ ಬರೆಯಬೇಕಾಗಿದೆ; ಸಂಗೀತ ಬರದಿದ್ದರೂ ಹಾಡಲೇ ಬೇಕಾಗಿದೆ. ತೊಟ್ಟಿಲಲ್ಲಿ ಕೆಡವಿ, ತೂಗಿ, ಹಗ್ಗವನ್ನು ಕೈಬಿಟ್ಟರೆ ಇವಳ ಕಣ್ಣು ಬೆಳ್ಳಿಯ ಬಟ್ಟಲಿನಂತೆ ಅರಳುತ್ತದೆ. ಆ ಬಟ್ಟಲಿನಲ್ಲಿ ಸಾಕಾದಷ್ಟು ನಿದ್ದೆಯನ್ನು ತಂದು ತುಂಬಲು ಒಂದು ಹಾಡು ಬೇಕೇ ಬೇಕು. ನೆನ್ನೆ ಹಾಡಿದ ಹಾಡು ನನಗೇ ಇಂದು ಬೇಸರವಾಗುತ್ತದೆ. ಅದನ್ನು ಇವಳಿಗೆ ಹೇಗೆ ಒಪ್ಪಿಸುವುದು? ಇದಕ್ಕಾಗಿ ಈಗೊಂದು ಆಗೊಂದು ಹಾಡು ಹುಟ್ಟುತ್ತದೆ.

ಬಿರುಗಾಳಿಯಂತಿದ್ದ ನನ್ನ ಮನಸ್ಸು ಹೀಗೆ ಬೆಳದಿಂಗಳ ಕಡೆಗೆ ಒಲಿಯುತ್ತಿರುವುದಕ್ಕೆ ಈ ತುಂಗಭದ್ರೆಯೆ ಕಾರಣ. ನಾನು ಏನು ಮಾಡುವಾಗಲೂ ಅವಳ ಆಸೆ ಮನಸ್ಸು ನನ್ನನ್ನು ಸೆಳೆಯುತ್ತವೆ. ನಾನು ಕಲಿತದ್ದನ್ನು ಮರೆಯಲೂ, ಹೊಸದನ್ನು ಕಲಿಯಲೂ ಅವಳ ಗುರುಕುಲದಲ್ಲಿ ಅವಕಾಶವಿದೆ. ಮೀನಾಕ್ಷಿ ಕೂಡ ಮಾತಾಡುವಾಗಲೂ ಎಂದೂ ಇಲ್ಲದ ಗಾಂಭೀರ್ಯ ಒದಗುತ್ತದೆ. ಇದರ ಇಂಗಿತವನ್ನು ಆಕೆ ಅರಿಯದವಳೇನಲ್ಲ!

ಮೊನ್ನೆ ಸಂಜೆ ಮನೆಗೆ ಬಂದಾಗ ತುಂಗಭದ್ರೆ ಬೃಂದಾವನದ ಹತ್ತಿರ ಆಡುತ್ತಿದ್ದಳು. ನಾನು ಒಳಗೆ ಬಂದದ್ದನ್ನು ನೋಡಿ ತಾನು ಓಡಿಬರುವ ಅವಸರದಲ್ಲಿ ಹೊಸಿಲ ಬಳಿ ಜಾರಿದಳು. ಹಣೆಯಲ್ಲಿ ಬೋರೆ ಬಂದಿತು. ನಾನು ಹಾರಿಹೋಗಿ ಅವಳನ್ನು ಎತ್ತಿ ತಂದು ಎದೆಯ ಮೇಲಿಟ್ಟುಕೊಂಡು ಸಮಾಧಾನಪಡಿಸುವಾಗ ಅವಳು ದೊಡ್ಡದಾಗಿ ಕಣ್ಣುಬಿಟ್ಟಳು. ಕಣ್ಣೀರು ಕೆನ್ನೆಯ ಮೇಲೆ ಉರುಳಿತು. ಇದೆಂಥ ಮಗು! ಇದೆಂಥ ಮನಸ್ಸು! ಎದೆಯ ಮೇಲೆ ದುಂಡು ಮುತ್ತು. ಆ ನೋಟವನ್ನು ನಾನು ಎಂದಿಗೂ ಮರೆಯಲಾರೆ.

✵

## ಜೀವನ ಮತ್ತು ನಿದ್ರೆ

ಜೀವನದಲ್ಲಿ ನಿದ್ರೆ ಒಳ್ಳೆಯದು. ಚಿರ ನಿದ್ರೆ ಮತ್ತೂ ಒಳ್ಳೆಯದು.
ಹುಟ್ಟದೇ ಇರುವುದಂತೂ ತೀರಾ ಒಳ್ಳೆಯದು.

– ಹೆನ್ರಿಚ್

# ಜಿಮ್ಮಿ ನಾನು ಮತ್ತು ಕನ್ನಡ ಕಸ್ತೂರಿ

**- ನಂದಿನಿ ಕಾಪಡಿ**

**ಮುಂ**ಬೈ ಮಹಾನಗರದ ಅಪಾರ ಜನಸ್ತೋಮದಲ್ಲೂ ನಾನು ಕನ್ನಡದವಳೆಂದು ಪತ್ತೆ ಹಚ್ಚಿಬಿಟ್ಟ ಶ್ರೇಯಸ್ಸು ಜಿಮ್ಮಿಯದು! ಬಸ್ಸಿಗಾಗಿ ಕಾಯುತ್ತಿದ್ದ ನಾನು ಕೈಚೀಲದಿಂದ ತೆಗೆದು ಓದಿದ್ದ ಪುಸ್ತಕ ಕನ್ನಡವಾದ್ದರಿಂದ ನನ್ನ ಹಿಂದೆಯೇ ನಿಂತಿದ್ದ, ಗೌರಾಂಗ, ಚಿನ್ನದ ಕೂದಲಿನ, ನೀಲ ಕಂಗಳ ಯುವಕ ಜಿಮ್ಮಿ ನಾನು ಕನ್ನಡಿಗಳೆಂದು ಕಂಡು ಹಿಡಿಯಲು ಸಾರ್ಥಕಗೊಂಡಿದ್ದ! ತಕ್ಷಣವೇ ಗಂಟಲನ್ನು ಸರಿಮಾಡಿಕೊಂಡು ''ಶ್ರೀಮತಿಯವರೇ, ಇಲ್ಲಿನಿಂದ ಅಂಧೇರಿಗೆ ಹೊರಡಲು ಯಾವ ಸಂಖ್ಯೆಯ ಬಸ್ಸು ಸರಿಯಾಗುತ್ತದೆ?'' ಎಂದು ಅಚ್ಚ ಕನ್ನಡದಲ್ಲಿ ನನ್ನನ್ನು ಪ್ರಶ್ನೆ ಕೇಳಿದಾಗ, ಕನ್ನಡ ನಾಡಿನಿಂದ ಬಹಳಷ್ಟು ವರ್ಷಗಳಿಂದ ಹೊರಗಿದ್ದ ನನ್ನ ಮಾತೃಭಾಷಾ ಒಲವು ಚಿಗುರಾಗಿ ನಾನೂ ಬಲು ಬೇಗನೇ ಅವನತ್ತ ನಕ್ಕು ಮಾತನಾಡಲು ತೊಡಗಿಬಿಟ್ಟೆ. ಹೀಗೆ ಪ್ರಾರಂಭವಾಯಿತು. ನನ್ನ ಜಿಮ್ಮಿಯ ಸ್ನೇಹ.

ಜಿಮ್ಮಿ ನಮ್ಮ ಬಿಲ್ಡಿಂಗಿನ ಪಕ್ಕದ ಬಿಲ್ಡಿಂಗಿನಲ್ಲೇ ಗೆಳೆಯನ ಮನೆಯಲ್ಲಿ ಇಳಿದುಕೊಂಡಿದ್ದರಿಂದ ನಮ್ಮ ಮನೆಗೆ ಬರಲು ಬಲು ಬೇಗ ತಯಾರಾಗಿಬಿಟ್ಟ. ಭಾರತಕ್ಕೆ ಬಂದು ಆರು ತಿಂಗಳಾಯಿತೆಂದೂ, ಅದರಲ್ಲಿ ಬೆಂಗಳೂರಿನಲ್ಲಿ ಎರಡು ತಿಂಗಳು. ಮೈಸೂರಿನಲ್ಲಿ, ಧಾರವಾಡದಲ್ಲಿ ಮತ್ತು ಮಂಗಳೂರಿನಲ್ಲಿ ತಲಾ ಒಂದೊಂದು ತಿಂಗಳು. ಮಿಕ್ಕ ಒಂದು ತಿಂಗಳಿನಲ್ಲಿ ಹಾಸನ, ಗದಗ, ಬಳ್ಳಾರಿ, ಕಾರವಾರ ಮತ್ತು ಬೆಳಗಾವಿಯಲ್ಲಿ ಕಳೆದನೆಂದು ತಿಳಿಸಿದ. ಅಮೇರಿಕದ ವಾಷಿಂಗ್ಟನ್ ಸ್ಟೇಟ್ ವಿಶ್ವವಿದ್ಯಾಲಯದಲ್ಲಿ, ವಿದೇಶೀ ಭಾಷಾಶಾಸ್ತ್ರದ ವಿಷಯದ ವಿದ್ಯಾರ್ಥಿಯಾಗಿ, ಅದರಲ್ಲಿ ಕನ್ನಡ ಭಾಷೆಯ ಬೆಳವಣಿಗೆ ಹೇಗೆ ಮುಂದುವರೆಯುತ್ತಿದೆ ಎಂಬ ವಿಷಯದಲ್ಲಿ ಅಭ್ಯಾಸ ಮಾಡುತ್ತಿದ್ದನೆಂದೂ ತಿಳಿಸಿದ. ನನಗೋ ತುಂಬಾ ಹೆಮ್ಮೆಯಾಯಿತು!

ತುಂಬಾ ವಿಶ್ವಾಸದಿಂದಲೇ ಅವನನ್ನು ಉಪಚರಿಸಿದೆ. ಗೊಜ್ಜವಲಕ್ಕಿಯನ್ನು ಲೊಟ್ಟೆ ಹೊಡೆದುಕೊಂಡೇ ತಿಂದ. ಕಾಫಿಯ ಲೋಟವನ್ನು ಶಬ್ದಮಾಡುತ್ತಲೇ ಹೀರುತ್ತಾ ಆನಂದಿಸಿದ.

''ಸರಿಯಪ್ಪಾ ಜಿಮ್ಮಿ, ನನ್ನ ಮಾತೃಭಾಷೆಯ ಬಗ್ಗೆ ತುಂಬಾ ಪಾಂಡಿತ್ಯ ಪಡೆದಿರಬೇಕು. ನಿನ್ನ ಅನಿಸಿಕೆಗಳು ಏನಪ್ಪಾ'' ಎಂದು ತುಂಬಾ ಕಳಕಳಿಯಿಂದಲೇ ಕೇಳಿದೆ.

''ನಿಮ್ಮ ಭಾಷೆ ತುಂಬಾ ಪುರಾತನವಾದದ್ದು, ಸಾಹಿತ್ಯ, ಸಂಸ್ಕೃತಿ ಎಲ್ಲದರಲ್ಲೂ ಹಿರಿಯ ಭಾಷೆ. ಆದರೆ ನೀವು ಕನ್ನಡಿಗರು ಅದನ್ನು ಕಾಪಾಡುತ್ತಿಲ್ಲ. ಬ್ರಿಟಿಷ್ ಕಾಲಾಂತರ ನಿಮ್ಮ ದಾಸ್ಯ ಭಾವನೆ ಇನ್ನೂ ಅಳಿದಿಲ್ಲ, ಅದಕ್ಕೇ ಕನ್ನಡವನ್ನು ಕೊಂದು, ಇಂಗ್ಲೀಷ್ ಭಾಷೆಯನ್ನು ಮುಂದು ಮಾಡುತ್ತಿದ್ದೀರಾ ನೀವುಕನ್ನಡಿಗರು'' ಎಂದು ಕಟುವಾಗೇ ಮೂದಲಿಸಿದ.

ಅಲ್ಲೇ ಮೂಲೆಯಲ್ಲಿ ಪೇಪರ್ ಹಿಡಿದು ಕುಳಿತಿದ್ದ ಯಜಮಾನರ ಕಿವಿಗಳು ನಿಮಿರಿ. ಅವರೂ ಪೇಪರ್ ಅಲ್ಲೇ ಇರಿಸಿ, ನಾವು ಕುಳಿತಿದ್ದೆಡೆ ಬಂದರು! ''ನೋಡು ಜಿಮ್ಮಿ ನಾನೂ ಕನ್ನಡದವನಲ್ಲ. ಆದರೆ ನಿನ್ನ ಹೇಳಿಕೆಗೆ ಮಾತ್ರ ನನ್ನ ಸಮ್ಮತಿ ಇದೆ. ನನಗೆ ಬೆಂಗಳೂರಿನಲ್ಲಿ ಹೋದಾಗ ಯಾರೂ ಕನ್ನಡದಲ್ಲಿ ಮಾತನಾಡಿಸುವುದೇ ಇಲ್ಲ. ನನ್ನ ತಪ್ಪು ವ್ಯಾಕರಣ ಹೊರಗೆ ಬರಲು ಅವಕಾಶವೇ ಇಲ್ಲ. ಎಲ್ಲರೂ ನನ್ನ ಹತ್ತಿರ ಇಂಗ್ಲೀಷಿನಲ್ಲೇ ಮಾತನಾಡಿಬಿಡುತ್ತಾರೆ' ಎಂದು ತಾವೂ ದನಿಗೂಡಿಸಿದರು!

''ಎಲಾ ಇವರ!'' ಎಂದುಕೊಂಡೆ ನಾನು ಒಳಗೊಳಗೇ! ''ನೋಡಿ ಶ್ರೀಮತಿಯವರೇ, ನಿಮ್ಮ ಜನ ಎಂದೂ ತಡವಾಗಿ ಬರುವವರಲ್ಲ, ಎಲ್ಲರೂ ಲೇಟಾಗಿ ಬರುವವರೇ, ಯಾರಿಗೂ ತುರ್ತು ಕೆಲಸವಿಲ್ಲಾ, ಎಲ್ಲರಿಗೂ ಅರ್ಜೆಂಟು ಕೆಲಸವೇ! ನೀವು ಹೇಗಿದ್ದೀರಿ ಎಂದು ಯಾರೂ ವಿಚಾರಿಸುವುದಿಲ್ಲ... ಹೌ ಆರ್ ಯೂ ಎಂದೇ ಪೀಠಿಕೆ. ಕನ್ನಡ ಭಾಷೆಯ ಪ್ರಯೋಗಕ್ಕೆ ಅವಕಾಶವೇ ಇಲ್ಲ! ಒಂದು ಕನ್ನಡ ವಾಕ್ಯದಲ್ಲಿ, ಎಲ್ಲ ಪದಗಳೂ ಕನ್ನಡವಾಗಿರಬೇಕಲ್ಲವೆ! ಊ.. ಹೂಂ... ನಿಮ್ಮ ಊರಿನಲ್ಲಿ ಒಂದು ವಾಕ್ಯದಲ್ಲಿ ಒಂದು ಕನ್ನಡ ಪದವಿದ್ದರೆ ಮಿಕ್ಕ ಐದು ಪದಗಳು ಇಂಗ್ಲೀಷಿನವೇ! ತುಂಬಾ ಅನ್ಯಾಯ!'' ಎಂದು ಉದ್ಗರಿಸಿದ ಜಿಮ್ಮಿ!

''ಹೌದಪ್ಪಾ! ನೀನು ಹೇಳುವುದೇನೋ ನಿಜ. ಹೋದ ಸಲ ಬೆಂಗಳೂರಿಗೆ ಹೋಗಿದ್ದಾಗ ಆಟೋನಲ್ಲಿ ಕುಳಿತಿದ್ದೆ ಮುಂದೆ ಸಂಪಿಗೆ ರಸ್ತೆಗಾಗಿ ಬಲಕ್ಕೆ ತಿರುಗಿಸಪ್ಪಾ'' ಎಂದೆ. ಆಟೋ ಚಾಲಕ ನನ್ನ ಕಡೆ ದುರ ದುರನೇ ನೋಡಿ ''ಯಾಕ್ರೀ, ಸರಿಯಾಗಿ ಕನ್ನಡದಲ್ಲಿ ಹೇಳೋಕ್ಕೆ ಬರಲ್ವೆ ನಿಮಗೆ? ರೈಟೋ, ಲೆಫ್ಟೋ ಹೇಳಿ'' ಎಂದ! ಇನ್ನು ತರಕಾರಿ ಮಾರ್ಕೆಟ್ಟಿನಲ್ಲಿ ಎಲೆಕೋಸು ಕೊಡು ಎಂದರೆ ''ಕ್ಯಾಬೇಜ್'' ಅಂತ ಹೇಳಲು ಗೊತ್ತಾಗಲ್ವೇ ಎಂದು ಮಾರುವವನು ದಬಾಯಿಸುತ್ತಾನೆ. ಮೂಲೆ ಅಂಗಡಿಯಲ್ಲಿ ''ಕಡ್ಡಿ ಪೆಟ್ಟಿಗೆ ಕೊಡಪ್ಪಾ'' ಎಂದರೆ ''ಮ್ಯಾಚಸ್'' ಎಂದು ಹೇಳೀಮ್ಮ, ನಿಮ್ಮ ಭಾಷೆ ಯಾರಿಗೆ ಅರ್ಥವಾಗ್ತದೆ ಎಂದು ಗದರಿಕೊಳ್ಳುತ್ತಾನೆ ಎಂದು ನಾನೂ ದನಿಗೂಡಿಸಿದೆ.

''ನೋಡಿ ಶ್ರೀಮತಿಯವರೇ, ನಿಮ್ಮೂರಿನ ಮಕ್ಕಳಿಗೆ ''ನಾಯಿ ನಾಯಿ ಮರಿ'' ಪದ್ಯ ಬರದು. ಆದರೆ ಬಾ ಬಾ ಬ್ಲಾಕ್ ಶಿಪ್ ಚೆನ್ನಾಗಿ ಕೈ ಕಣ್ಣಾಡಿಸುತ್ತಾ ಹೇಳುತ್ತವೆ.'' ಇನ್ನು ನಿಮ್ಮೂರಿನ ಉಪಹಾರ ಗೃಹಕ್ಕೆ ಹೋಗಿ ನೋಡಿ ''ಬೈಟೂ ಕಾಫಿ'' ''ಹಾಟ್ ಖಾರಾಭಾತ್'' ''ಯಮ್ಮೀ ತ್ರೀ ಇನ್ ಓನ್ ದೋಸೆ' ಹೀಗಾದರೆ ಹ್ಯಾಗಮ್ಮಾ?

ಅಷ್ಟರಲ್ಲಿ ಮಗಳು ದನಿಗೂಡಿಸಿದಳು. ಮುಂಬೈನಲ್ಲಿ ಮರಾಠಿ ಭಾಷೆಯ ಶುದ್ಧತೆ ಹೇಗೆ ಕಾಪಾಡಿಕೊಂಡಿದ್ದಾರೆ! ವೃದ್ಧರಾಗಲೀ ಮಕ್ಕಳಾಗಲೀ ಹೇಗೆ ಭಾಷಾಭಿಮಾನಿಗಳು ಎಂದೆಲ್ಲಾ ಹೇಳಿದಳು. ಪ್ರತಿಯೊಂದು ರಾಜ್ಯದಲ್ಲೂ ಆಯಾ ಭಾಷೆಯ ಶುದ್ಧತೆ ಹೇಗೆ ಕಾಪಾಡಲಾಗಿದೆ. ಆದರೆ ಕನ್ನಡ ಭಾಷೆಯನ್ನು ಕನ್ನಡಿಗರೇ ಕೊಲ್ಲುವುದು ಸರಿಯಲ್ಲ ಎಂದು ಅವನ ಅಭಿಮತ ಎಲ್ಲರಿಗೂ ಸರಿ ಎನಿಸಿತು.

ಜಿಮ್ಮಿ ಹೊರಟ. ಮತ್ತೆ ನಾಳೆ ಬಂದು ನನ್ನ ಹತ್ತಿರ ಕೆಲವು ವಿಷಯಗಳನ್ನು ಚರ್ಚಿಸುವೆನೆಂದ. ಮಾರನೆಯ ದಿನ ಕೈಯಲ್ಲೊಂದು ಟೇಪ್ ರೆಕಾರ್ಡರ್ ಹಿಡಿದುಕೊಂಡೇ

ಬಂದಿದ್ದ. ಕರ್ನಾಟಕ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಜನರು ದಿನಗಟ್ಟಲೆ ಮಾತನಾಡುವ ಕನ್ನಡ ಭಾಷೆಯಲ್ಲಿ ಎಷ್ಟರ ಮಟ್ಟಿಗೆ ಶುದ್ಧತೆ ಕಾಪಾಡಿಕೊಂಡಿದ್ದಾರೆ ಎಂದು ಅವನ ವಿಶೇಷ ಅಭ್ಯಾಸದ ವಿಷಯದಂತೆ.

ಬೆಂಗಳೂರಿನ ಕನ್ನಡದಲ್ಲಿ ಇಂಗ್ಲೀಷಿನ ಬಳಕೆಯೇ ಜಾಸ್ತಿ, ಮೈಸೂರಿನವರೂ ಆ ದಿಶೆಯಲ್ಲೇ ಸಾಗಿದ್ದಾರಂತೆ. ಮಂಗಳೂರು ಪರವಾಗಿಲ್ಲವಂತೆ. ಕಾರವಾರದಲ್ಲಿ ಕನ್ನಡ ಕಮ್ಮಿಯಂತೆ! ಧಾರವಾಡ ಉತ್ತಮವಂತೆ! ಬಳ್ಳಾರಿಯಲ್ಲಿ ತೆಲುಗಿನ ಭಾಷೆಯ ಮಿಶ್ರಣವಂತೆ! ಇನ್ನು ಬೆಳಗಾವಿಯಲ್ಲಿ ಇವನ ಕನ್ನಡ ಕೇಳಿದ ತಕ್ಷಣ ಮರಾಠಿಯಲ್ಲಿ ಬೈದು ಹೊಡೆಯಲೇ ಬಂದರಂತೆ!

ಬೆಂಗಳೂರಿನ ಆಟೋ ಚಾಲಕ ಹೆಚ್ಚಾಗಿ ತಮಿಳು ಮತ್ತು ಹಿಂದಿಯನ್ನೇ ಮಾತನಾಡುತ್ತಾನಂತೆ! ಶಾಸಕರು ಕನ್ನಡ ಹೆಚ್ಚಾಗಿ ಬಳಸಿದರೆ, ಆಡಳಿತಗಾರರು ಬರೀ ಆಂಗ್ಲ ಭಾಷೆಯನ್ನೇ ಬಳಸುವವರಂತೆ! ಆಸ್ಪತ್ರೆಯಲ್ಲೂ ಇಂಗ್ಲೀಷಿನ ಹಾವಳಿಯಂತೆ! ಹೋಟಲುಗಳಲ್ಲಿ ಕನ್ನಡ ಹೆಸರಿಗೆ ಮಾತ್ರ ಉಪಯೋಗಿಸಲ್ಪಡುತ್ತಂತೆ. ಹಳ್ಳಿಯಲ್ಲಿರುವ ಶಾಲೆಗಳಲ್ಲಿ ಮಾತ್ರ ಕನ್ನಡ. ಶುದ್ಧವಾಗಿರುವಂತೆ! ಬೇರೆ ಎಲ್ಲ ಕಡೆ ಬೆರಕೆಯೇ ಬೆರಕೆಯಂತೆ!

ಕುತೂಹಲಕ್ಕಾಗಿ ಅವನು ದೇಶದ ಬೇರೆ ಬೇರೆ ರಾಜ್ಯಗಳಿಗೆ ಭೇಟಿ ಕೊಟ್ಟು ಅಲ್ಲಿರುವ ಭಾಷೆಯ ಶುದ್ಧತೆಯನ್ನು ನೋಡಿ ಕನ್ನಡ ಮಾತ್ರ ಕಲಬೆರಕೆ ಎಂಬ ತೀರ್ಮಾನಕ್ಕೆ ಬಂದಿದ್ದಾನಂತೆ!

ಅವನ ಎಲ್ಲ ಮಾತು ಕೇಳಿ ಒಂದು ಕ್ಷಣ ಮೌನವಾಗಿ ಹೋದೆ ನಾನು! ಪ್ರಾಥಮಿಕ ಶಾಲೆಯಲ್ಲಿ ನಾನು ಓದಿದ್ದ ಒಂದೊಂದೇ ಕನ್ನಡ ಪದ್ಯಗಳು ನೆನಪಿಗೆ ಬಂದವು! ''ಬೆಕ್ಕೇ ಬೆಕ್ಕೇ ಮುದ್ದಿನ ಸೊಕ್ಕೆ'' ಯಿಂದ ''ಹಚ್ಚೇವು ಕನ್ನಡದ ದೀಪ''ದ ತನಕ ಎಲ್ಲಾ ನೆನಪುಗಳು ಹೊರಬಂದವು.

ಸರ್ವಜ್ಞನ ವಚನಗಳು, ಜಿ.ಪಿ. ರಾಜರತ್ನಂರವರ ''ಬಣ್ಣದ ತಗಡಿನ ತುತ್ತೂರಿ''. ಕುವೆಂಪುರವರ ಮಹಾಕಾವ್ಯಗಳು, ದ.ರಾ. ಬೇಂದ್ರೆಯವರ ಸಾಹಿತ್ಯ! ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗ... ಹೀಗೆ ಒಂದೇ ಎರಡೇ!

ಕರ್ನಾಟಕದ ಹೊರಗೆ ಕುಳಿತು, ಪರದೇಶದಿಂದ ಬಂದಿಳಿದಿದ್ದ ಈ ಬಿಳಿಯ ಹುಡುಗ ನನ್ನ ಕನ್ನಡಿಗತನವನ್ನು ಒಂದು ರೀತಿಯಲ್ಲಿ ಮೇಲು ಕೆಳಗೆ ಮಾಡಿ ಹಾಕಿಬಿಟ್ಟಿದ್ದ! ''ನಮ್ಮದಾದ ಭಾಷೆಯು, ನಿಮ್ಮದಾದ ಭಾಷೆಯು, ಸೊಗಸಾದ ಕನ್ನಡವು ಅಲ್ಲವೆ'' ಎಂಬ ಹಾಡನ್ನು ನಾವು ಶಾಲೆಯಲ್ಲಿ ಎಷ್ಟು ಸಲ ಹಾಡಿದ್ದೆವು! ''ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು'' ಎಂದು ಎಷ್ಟು ಸಲ ಕೂಗಿಕೊಂಡಿದ್ದೆವು!

ಒಂದು ನಿಮಿಷ ಮನ ಅಲ್ಲೋಲ ಕಲ್ಲೋಲವಾಗಿ ಬಿಟ್ಟಿತು. ಜಿಮ್ಮಿಗೆ ತಿಂಡಿ ಕೊಡಲು ಒಳಗೆ ಹೋದೆ. ನನ್ನ ಕನ್ನಡಾಂಬೆಗೆ ಇಷ್ಟೊಂದು ಅನ್ಯಾಯವಾಗಿದೆಯೇ ಎಂದು ಖೇದವಾಯಿತು. ಒಂದೆರಡು ಬಾರಿ ಕಣ್ಣುಗಳು ಮಂಜಾದವು.... ಜಿಮ್ಮಿ ದೋಸೆಯ

ತಟ್ಟೆಯನ್ನು ನನ್ನ ಕೈಯಿಂದ ತೆಗೆದುಕೊಳ್ಳುತ್ತಾ ''ಇನ್ನೂ ತಡವಾಗಿಲ್ಲ, ನೀವೆಲ್ಲಾ ಎಚ್ಚೆತ್ತರೆ ನಿಮ್ಮ ಭಾಷೆಯನ್ನು ಕಾಪಾಡಿಕೊಳ್ಳಬಹುದು'' ಎಂದು ತಿಳಿಸಿದ. ನಮ್ಮ ಯಜಮಾನರ ಹತ್ತಿರ ಬೆಂಗಳೂರಿನಲ್ಲಿ ಯಾವ ಯಾವ ಕಡೆ ಎಂತೆಂತಹ ದೋಸೆ ಸಿಗುತ್ತದೆ ಎಂದು ಹೇಳಲು ತೊಡಗಿದ. ಎಂ.ಟಿ.ಆರ್. ದೋಸೆ, ಸಿ.ಟಿ.ಆರ್. ದೋಸೆ, ವಿದ್ಯಾರ್ಥಿ ಭವನದ ದೋಸೆ, ದಾವಣಗೆರೆಯ ಬೆಣ್ಣೆ ದೋಸೆ, ಮೈಸೂರಿನ ಸೆಟ್ ದೋಸೆ, ಎಂದೆಲ್ಲಾ ವರ್ಣಿಸಿದ. ಯಜಮಾನರ ಮುಖ ಪ್ರಸನ್ನವಾಗುತ್ತಾ ಹೋಯಿತು! ನನ್ನ ಅಣ್ಣ ಅವರಿಗೆ ತರತರಹ ದೋಸೆ ತಿನ್ನಿಸುತ್ತಾರೆ. ಪ್ರತಿಬಾರಿ ಬೆಂಗಳೂರಿಗೆ ಬಂದಾಗ! ಅದೆಲ್ಲಾ ನೆನಪಿನಿಂದ ಇವರು ಖುಷಿಯಾದರು!

ಮಾರನೆಯ ದಿನ ಜಿಮ್ಮಿ ಬಂದಾಗ ಸ್ವಲ್ಪ ಖಾರವಾಗಿದ್ದ. ''ನಿಮ್ಮ ಬೆಂಗಳೂರಿನವರಿಗೆ ಭಾಷಾಭಿಮಾನ ವೆಂಬುದಿಲ್ಲ'' ಎಂದುಬಿಟ್ಟ. ಬೇರೆ ಬೇರೆ ಭಾಷೆಗಳಿಗೆ ಹೊಂದಿಸಿಕೊಂಡು ಹೋಗಿ ಬಿಡುತ್ತೀರಿ. ತನ್ನತನ ಕಾಪಾಡಿಕೊಳ್ಳುವುದಿಲ್ಲ ಎಂದು ಕಟುವಾಗಿ ನುಡಿದು ಬಿಟ್ಟ.

ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ನನಗೆ ಇದು ಸರಿಯಾಗಿ ಕಾಣಲಿಲ್ಲ. ಸ್ವಲ್ಪ ನಾನೂ ಚರ್ಚೆಗೆ ಇಳಿದೆ. ನೀವು ಬೆಂಗಳೂರಿನವರು. ಹಾಗೆ, ಹೀಗೆ ಎಂದು ಸ್ವಲ್ಪ ಜಾಸ್ತಿಯೇ ಮೂದಲಿಸಿದ. ನನ್ನ ಬೆಂಗಳೂರು ಹೃದಯಕ್ಕೆ ಗಾಯವಾಗಿದ್ದು ಅವನಿಗೆ ತಿಳಿಯಲೇ ಇಲ್ಲ! ''ಇಂದು ನೀವು ಮಾಡಿರುವ ದೋಸೆ ಪಲ್ಯದಲ್ಲಿ ರುಚಿಯೇ ಇಲ್ಲ'' ಎಂದು ಹೇಳಿದ್ದರೂ ನನಗೆ ಅಷ್ಟು ಕಷ್ಟವಾಗುತ್ತಿರಲಿಲ್ಲವೇನೋ! ಆದರೆ ಮೂರು ನಾಲ್ಕು ದಿನಗಳಲ್ಲಿ ''ನೀವು ಬೆಂಗಳೂರಿನವರು, ಕನ್ನಡಾಭಿಮಾನಿಗಳಲ್ಲ'' ಎಂದು ಬಾರಿ ಬಾರಿ ಹೇಳಿದ್ದು ಯಾರೋ ಬೇಜಾರಾಯಿತು. ಇತರರನ್ನು ತುಂಬು ಹೃದಯದಿಂದ ಸ್ವಾಗತಿಸಿ, ಅವರಿಗೆ ಅನುಕೂಲವಾಗಲೆಂದು ಅವರವರ ಭಾಷೆಗಳಲ್ಲೇ ಮಾತನಾಡಿಸುವ ನಮ್ಮ ಹೃದಯವಂತಿಕೆ ಇವನಿಗೇಕೆ ಸರಿ ತೋರುತ್ತಿಲ್ಲ ಎಂದು ಪತಿದೇವರ ಹತ್ತಿರ ಪೀಠಿಕೆ ಹಾಕಿದೆ.

ಪತಿದೇವರ ಮನ ಕರಗಿತು. ''ಅದೇನೋ ನಿಜ! ಬರೀ ಭಾಷೆಯ ಶುದ್ಧತೆ ಎನ್ನುತ್ತಾ ಮಾನವೀಯತೆ ಮರೆಯಲು ಸಾಧ್ಯವೆ'' ಎಂದು ಜೀವನದಲ್ಲಿ ಮೊದಲ ಬಾರಿಗೆ ನನ್ನ ಮತ ಅನುಮೋದಿಸಿ ಬಿಟ್ಟರು! ನಾನು ಮದುವೆಯ ನಂತರ ತಮ್ಮ ಭಾಷೆ ಕಲಿತದ್ದು, ನನ್ನ ತಾಯಿ ತಮ್ಮ ಬೀಗಿತ್ತಿಯೊಂದಿಗೆ ಮಾತನಾಡಬೇಕೆಂದು ಕೊಂಕಣಿ ಭಾಷೆ ಕಲಿತುಕೊಂಡಿದ್ದು, ಎಲ್ಲವನ್ನೂ ಬಾಯಿಬಿಟ್ಟು ಹೇಳಿ ''ನೀವು ಕನ್ನಡದವರು ಹಿರಿ ಹೃದಯದವರು'' ಎಂದರು! ಧನ್ಯವಾಗಿ ಬಿಟ್ಟಿತು ನನ್ನ ಮನಸ್ಸು!

ಮಾರನೆಯ ದಿನ ಜಿಮ್ಮಿ ಬಂದ. ''ಇಂದೇ ರಾತ್ರಿ ವಾಷಿಂಗ್ಟನ್‌ಗೆ ವಾಪಸ್ಸು ಹೊರಟಿದ್ದೀನಿ'' ಎಂದ.

''ಯಾಕಪ್ಪಾ, ಇನ್ನೂ ಒಂದು ತಿಂಗಳು ನಿನ್ನ ಕೆಲಸ ಇಲ್ಲೇ ಇತ್ತಲ್ಲ'' ಎಂದೆ.

''ನಿಜ, ಆದರೆ ಪರಿಸ್ಥಿತಿಯೇ ಹಾಗೆ ಬಂದಿದೆ ನೋಡಿ. ನನ್ನ ಗೆಳತಿಗೆ ಈ ವಾರದಲ್ಲೇ ಪ್ರಸೂತಿಯಾಗುವುದಿದೆಯಂತೆ. ನಮ್ಮ ದೇಶದ ವಾಡಿಕೆಯ ಪ್ರಕಾರ ಶಿಶುವಿನ ತಂದೆ ಪ್ರಸೂತಿಯ ಸಮಯದಲ್ಲಿ ಜತೆಯಲ್ಲಿರಬೇಕು'' ಎಂದು ವಿವರಿಸಿದ.

"ಓಹೋ ತಂದೆಯಾಗುತ್ತಿದ್ದೀಯಾ! ಅಭಿನಂದನೆಗಳು! ಮದುವೆ ಯಾವಾಗ" ಎಂದು ವಿಚಾರಿಸಿದೆ ಖುಷಿಯಾಗಿಯೇ, "ಮದುವೆಯ ಪ್ರಸಂಗವೇನಿಲ್ಲಾ ನನ್ನ ಗೆಳತಿ ತಾನೇ ಶಿಶುವನ್ನು ಮುಂದೆ ತರುವುದಾಗಿ ಮಾತು ಕೊಟ್ಟಿದ್ದಾಳೆ. ನನಗೇನೂ ಜವಾಬ್ದಾರಿಯಿಲ್ಲ" ಎಂದು ತುಂಬಾ ಖಡಾಖಂಡಿತವಾಗಿ!

ಅದೇನು ಬಂದಿತೋ ನನ್ನ ಮೇಲೆ! "ನೋಡು ಜಿಮ್ಮಿ ನಾವು ಕನ್ನಡಿಗರು ಮಾತ್ರ ಹಾಗಲ್ಲ, ಮದುವೆ ಮಾಡಿಕೊಂಡು, ನಂತರ ಮಕ್ಕಳಾಗಿ ಮಕ್ಕಳನ್ನು ಪೂರ್ತಿ ಬೆಳೆಸುವ ಜವಾಬ್ದಾರಿ ತಂದೆ ತಾಯಿಗಳ ಮೇಲೆ ಕನ್ನಡಿಗರೇ ಏಕೆ, ಪೂರ್ತಿ ಭಾರತದಲ್ಲೇ ಅದೇ ರೀತಿ" ಎಂದುಬಿಟ್ಟೆ! ಜಿಮ್ಮಿಯ ಮುಖ ಸ್ವಲ್ಪ ಸಣ್ಣದಾದ ಹಾಗೆ ಕಂಡಿತು. ವಿಲಕ್ಷಣ ಸಂತೋಷವಾಯಿತು!

✵

# ತುಂತುರು ತುಂತುರು ತುಂತುರು ತುಂತುರು ತುಂತುರು ತುಂತುರು ತುಂತುರು

- ದಂನಆ

- ಎ. ರಾಜಾ ಅವರ ಸ್ಪೆಕ್ಟ್ರಂ ಹಗರಣ ತಮಿಳುನಾಡಿನ ಜನಗಳಿಗೆ ಹೇಗೆ ತಿಳಿಯಿತು? ಡಿಎಂಕೆ ಸರ್ಕಾರ ಉಚಿತವಾಗಿ ಹಂಚಿದ ಟೀವಿ ಸೆಟ್‌ಗಳ ಮೂಲಕ!
- ಈ ಜಗತ್ತಿನಲ್ಲಿ ಎರಡು ತರಹದ ಮಂದಿ ಇದ್ದಾರೆ. ಒಂದು, ದಪ್ಪಗಿರುವವರು. ಇನ್ನೊಂದು, ತೂಕವನ್ನು ಕಡಿಮೆ ಮಾಡಿಕೊಳ್ಳಬೇಕಾದವರು.
- ನಾನು ನನ್ನ ದುಃಖವನ್ನೂ ಹಂಚಿಕೊಳ್ಳುವುದಿಲ್ಲ, ಸುಖವನ್ನೂ ಹಂಚಿಕೊಳ್ಳುವುದಿಲ್ಲ. ಹಾಗೆಯೇ ನನ್ನ ಸಂಪತ್ತನ್ನೂ ಸಹ.
- When the best actors are chosen by other actors, it's called the Oscars. When the best actors are chosen by the people, it's called an election.
- ಹಲಸೂರು ಕೆರೆ ಅಭಿವೃದ್ಧಿಗೆ ಒಂದು ಕೋಟಿ ರೂಪಾಯಿ ಎಂದಾಗ ನಿಮಗನಿಸುವುದು.

**ಮೆಲುಕು ಹಾಕುವಂತಹ ಮಾತುಗಳ ಗುಚ್ಛ**

- ಯಶಸ್ಸಿನ ಹಾದಿ ಯಾವಾಗಲೂ ನಿರ್ಮಾಣ ಹಂತದಲ್ಲೇ ಇರುತ್ತದೆ.
- ನಾನೆಷ್ಟು ಚತುರ ಎಂದರೆ ನಾನು ಹೇಳುವ ಒಂದು ಪದ ಸಹ ನನಗೇ ಅರ್ಥವಾಗುವುದಿಲ್ಲ.
- Talent might belong solely to the self, but withers when it becomes selfish.
- Idea-logical ಎಂದರೆ?
- ದೇವರನ್ನು ನಂಬುವವರಿಗಿಂತ ನಂಬದಿರುವವರಿಗೇ ದೇವರ ಬಗ್ಗೆ ಹೆಚ್ಚು ಸಿಟ್ಟು ಬರುತ್ತದೆ.
- ಹಣ ರಕ್ತದಂತೆ – ಚಲನಗೊಳ್ಳುತ್ತಿರಲೇಬೇಕು.
- Everyone is kneaded out of the same dough but not baked in the same oven.
- ಗುರುವು ಗೆಲುವಿನತ್ತ ಕರೆದೊಯ್ಯುವ ಸೋಪಾನವೇ ಹೊರತು ಅವನೇ ಗುರಿಯಾಗಬಾರದು.
- ನೀವು ವಿಐಪಿ ಆಗಿದ್ದರೆ ಸಾಲದು ವಿಐಪಿ ಎಂದು ತೋರಿಸಿಕೊಳ್ಳಬೇಕು ಸಹ.
- 'ಜೀವನದಲ್ಲಿ ಒಮ್ಮೆ ಬರುವ ಅವಕಾಶ' ಎಂದರೆ ಇನ್ನೊಮ್ಮೆ ಸಿಗುವುದೇ ಇಲ್ಲ ಎಂದು ಅರ್ಥವೆ?
- ಮಕ್ಕಳನ್ನು ಬೆಳೆಸುವುದು ಎಂದರೆ ತೋಡಾ ಖುಷಿ ತೋಡಾ ಗೆರಿಲ್ಲಾ ವಾರ್‌ಫೇರ್.
- ನಾಲಿಗೆಯಿಂದ ಹೊರಬಿದ್ದ ಮಾತು ಮನಸ್ಸಿನೊಳಗಿರುವುದಕ್ಕಿಂತ ಹರಿತವಾಗಿರುತ್ತದೆ.



# ಚಕೋತ ಗಿಡಕ್ಕೆ ಚಳ್ಳೇಹಣ್ಣು

**- ನಾಗೇಶ ಹೆಗಡೆ**

**ಕಾ**ರನ್ನು ಹುಷಾರಾಗಿ ಅಪಾರ್ಟ್‌ಮೆಂಟ್ ಗೋಡೆಯ ಸಮೀಪ ನಿಲ್ಲಿಸಿ, ಎರಡು ನಿಮಿಷ ಆಚೀಚೆ ನೋಡಿದೆ. ಯಾರೂ ನೋಡುತ್ತಿಲ್ಲವೆಂದು ಖಾತ್ರಿಯಾದ ಮೇಲೆ ಕೆಳಕ್ಕಿಳಿದು ಡಿಕ್ಕಿಯಿಂದ ಮೆಲ್ಲಗೆ ಹತ್ಯಾರಗಳನ್ನು ಹೊರಕ್ಕೆ ತೆಗೆದೆ. 'ಸದಾರಮೆ' ನಾಟಕದ ಫೇಮಸ್ ಕಳ್ಳನ ಹಾಗೆ ಮತ್ತೆ ಅತ್ತಿತ್ತ ನೋಡಿದೆ. ಬೆಂಗಳೂರಿನ ಬೆಳಗಿನ ಹತ್ತು ಗಂಟೆ ಎಂದರೆ ಯಾರಿಗೂ ಯಾರನ್ನೂ ನೋಡಲು ಪುರುಸೊತ್ತಿರುವುದಿಲ್ಲ ಎಂಬ ಗ್ಯಾರಂಟಿಯಿತ್ತು. ಆಚೀಚಿನ ಅಪಾರ್ಟ್‌ಮೆಂಟ್‌ಗಳ ಬಾಲ್ಕನಿಯಿಂದಲೂ ಯಾರೂ ಕೆಳಕ್ಕೆ ನೋಡುತ್ತಿಲ್ಲವೆಂಬುದನ್ನು ಖಾತ್ರಿ ಮಾಡಿಕೊಂಡೆ. ಹುಷಾರಾಗಿ ತಗ್ಗಿ ಬಗ್ಗಿ ಕಾರು ಮತ್ತು ಗೋಡೆಯ ನಡುವಣ ಇಕ್ಕಟ್ಟಿನಲ್ಲಿ ನನ್ನನ್ನು ನಾನು ಮರೆ ಮಾಡಿಕೊಂಡೆ. ನನಗೆ ಬೇಕಿದ್ದ ನಿಧಿ ಅಲ್ಲೇ ಕಾಲ ಬಳಿ ಇತ್ತು. ಬಾಗಿ ಹತ್ಯಾರಗಳನ್ನು ಒಂದೊಂದಾಗಿ ಸದ್ದು ಮಾಡದಂತೆ ಬಿಡಿಸಿದೆ.

ಹತ್ಯಾರ ಮತ್ತೇನಲ್ಲ, ಒಂದು ಪುಟ್ಟ ಸಟ್ಟುಗ, ಒಂದು ಹಳೇ ಮೊರ ಮತ್ತು ಅವನ್ನು ಸುತ್ತಿಟ್ಟ ಒಂದು ಕ್ಯಾರಿಬ್ಯಾಗು. ಸದ್ದಾಗದಂತೆ ಕ್ಯಾರಿಬ್ಯಾಗನ್ನು ಅರಳಿಸಿ ಇನ್ನೇನು ಸಟ್ಟುಗವನ್ನು ನೆಲಕ್ಕೆ ಒತ್ತಬೇಕು ಅನ್ನುವಷ್ಟರಲ್ಲಿ ಯಾರದೋ ಬೈಕ್ ಬಂದು ಕಾರಿನ ಬಳಿಯೇ ನಿಂತಿತು. ನಾನು ಮತ್ತಷ್ಟು ಬಗ್ಗಿದರೂ ಸಿಕ್ಕಿಬಿದ್ದೆ.

'ಅದೇನ್ ಸಾರ್, ಏನ್ ಮಾಡ್ತಾ ಇದೀರಿ ಆ ಸಂದಿಯಲ್ಲಿ?' ಎಂದು ಕೇಳುತ್ತ ಆ ವ್ಯಕ್ತಿ ತನ್ನ ಹೆಲ್ಮೆಟ್ ತೆಗೆಯುತ್ತ ಸಮೀಪವೇ ಬಂದಾಗ ನನಗೆ ಕೈಯಲ್ಲಿದ್ದುದು ಬಾಯಿಗೆ ಬಂದಂತಾಯಿತು. ಸದ್ಯ ನನ್ನನ್ನು ಕಳ್ಳ ಎಂದು ತಿಳಿಯದೆ, 'ಸಾರ್' ಅಂತ ಸಂಬೋಧಿಸಿದನಲ್ಲ; ಸಮಾಧಾನ. ಆದರೆ ನಿಜಕ್ಕೂ ಕಳುವು ಮಾಡಲೆಂದೇ ಇಳಿದಿದ್ದ ನನಗೆ ಅರ್ಧ ಡಜನ್ ಕುಂಟು ನೆಪಗಳು ನೆನಪಿಗೆ ಬಂದು ನುಗ್ಗಿದವು. ಕಾರಿನ ಕೀಬಂಚ್ ಬಿತ್ತೆಂದು ಹೇಳಲೆ, ಮೊಬೈಲ್ ಬಿತ್ತೆಂದು ಹೇಳಲೆ, ಕನ್ನಡಕ ಹೆಕ್ಕುತ್ತಿದ್ದೇನೆಂದು ಹೇಳಲೆ? ಪರ್ಸ್ ಬಿತ್ತು ಅಥವಾ ಅದರಿಂದ ಡಿಎಲ್ ಕಾರ್ಡು, ವೋಟರ್ ಐಡಿ, ಪೆಟ್ರೋ ಕಾರ್ಡು, ಪ್ಯಾನ್ ಕಾರ್ಡು ಬಿತ್ತೆಂದು ಹೇಳಲೆ....? ಅಥವಾ ಕರ್ಚೀಫ್ ಬೀಳಿಸಿಕೊಳ್ಳಲೆ?

ಯಾವ ನೆಪವನ್ನು ಒಡ್ಡಲು ಹೋದರೂ ನನ್ನ ಕೈಯಲ್ಲಿದ್ದ ಹತ್ಯಾರವೇ ನನಗೆ ಕೈಕೊಟ್ಟಿತ್ತು.

'ಏನ್ ಸಾರ್ ಅದು ಕೈಯಲ್ಲಿ ಸ್ಕೂಪು, ಮೊರ...?' ಎಂದು ಆತ ಕೇಳಿಯೇ ಬಿಟ್ಟ. ನಾನೊಬ್ಬ ಪತ್ರಕರ್ತ ಕಣಯ್ಯಾ! ಸ್ಕೂಪು ನನ್ನ ದಂಡಾಯುಧ ಎಂದು ಆತನಿಗೆ ಹೇಳಬಹುದಿತ್ತು. ಆದರೆ ಈ ಮಾತು ನನಗೆ ಹೊಳೆಯುವ ಮೊದಲೇ ಆತ ನನ್ನ ಕಾಲಬಳಿ ನೋಡಿ, 'ಪೀಜನ್ ಪೂಪ್! ಗಲೀಜು, ಸಾರ್ ತುಂಬಾ ಗಲೀಜಿದೆ, ತುಳೀಬೇಡಿ' ಎಂದ.

ಪಾರಿವಾಳಗಳ ಈ ಹಿಕ್ಕೆಗಳನ್ನು ಬಾಚಿಕೊಳ್ಳಲೆಂದೇ ನಾನು ಇಷ್ಟೆಲ್ಲ ಸರ್ಕಸ್ ಮಾಡುತ್ತಿದ್ದೇನೆಂದು ಹೇಗೆ ಹೇಳುವುದು? ಹೇಳದೇ ಬೇರೆ ದಾರಿಯೇ ಇರಲಿಲ್ಲ. ಆ ಕಡೆ ಈತ, ಈ ಕಡೆ ಕಾರಿನ ಅರೆತೆರೆದ ಬಾಗಿಲು. ನನಗೆ ನಿಜಕ್ಕೂ ದಾರಿ ಇರಲಿಲ್ಲ. ಹಿಕ್ಕೆ ಹೆಕ್ಕಲೆಂದೇ ಬಂದೆನೆಂದು ಹೇಳುತ್ತ ತಗ್ಗಿಬಗ್ಗಿದೆ. ಅವನಿಗೆ ಅಚ್ಚರಿ.

'ಅದ್ಯಾಕೆ ಸಾರ್? ಪೀಜನ್ ಬ್ಲಡ್‌ನಲ್ಲಿ ಮೆಡಿಸಿನ್ ಇದೇಂತ ನಮ್ ಫ್ರೆಂಡ್ಸು ಹೇಳ್ತಾ ಇದ್ರು. ಪೂಪ್‌ನಲ್ಲೂ ಇರುತ್ತಾ?' ಎಂದು ಕೇಳಿದ.

ಹೇಗೆ ಹೇಳೋದು ಈ ಸಿಲಿಕಾನ್ ಸಿಟಿಯ ಟೆಕ್ಕಿಗೆ? ಪಾರಿವಾಳಗಳ ಗಲೀಜಿನಲ್ಲಿ ರಂಜಕದ ಅಂಶ ಜಾಸ್ತಿ ಇರುತ್ತದೆ. ಅದು ಉತ್ತಮ ಸಾವಯುವ ಗೊಬ್ಬರ. ಆದರೆ ನಮ್ಮ ಹಳ್ಳಿಯಲ್ಲಿ ಪಾರಿವಾಳ ಇಲ್ಲ. ಇದ್ದರೂ ಹೆಕ್ಕಬಹುದಾದಷ್ಟು ಹಿಕ್ಕೆರಾಶಿ ಸಿಗೋದೇ ಇಲ್ಲ. ಬೇಕಿದ್ದದ್ದು, ಬೇಡವಾಗಿದ್ದು ಎಲ್ಲವನ್ನೂ ಗುಡ್ಡೆ ಹಾಕುವಲ್ಲಿ ನೀವು ಸಿಟಿ ಜನರೇ ನಿಸ್ಸೀಮರು. ಇಲ್ಲಿ ಪಾರಿವಾಳಗಳು ವರ್ಷಾನುಗಟ್ಟಲೆ ರಾಶಿ ಬೀಳಿಸಿದ್ದರಲ್ಲಿ ಒಂದರ್ಧ ಕಿಲೋ ಒಯ್ದು ನಮ್ಮ ನಿಂಬೆಗಿಡಕ್ಕೆ ಹಾಕಬೇಕಿದೆ ಎಂದು ಪೆದ್ದುಪೆದ್ದಾಗಿ ನಿಜ ಸಂಗತಿಯನ್ನು ಹೇಳುತ್ತ ಮತ್ತೆ ಬಗ್ಗಿದೆ.

ರಂಜಕ ಎಂದಿದ್ದು ಅವನ ಕಿವಿಗೆ ರಂಜನೀಯವೆನಿಸಿರಬೇಕು. 'ಹೇಯ್, ದಿಸ್ ಈಸ್ ಕೂಲ್! ನಿಲ್ಲಿ, ನಾನೂ ಹೆಲ್ಪ್ ಮಾಡ್ತೇನೆ' ಎನ್ನುತ್ತ ತಾನೂ ಬಾಗಿ ಕಾಂಕ್ರೀಟ್ ನೆಲದ ಮೇಲಿನ ಒಣ ಹಿಕ್ಕೆಗಳನ್ನು ಬೈಕಿನ ಕೀಲಿಯಿಂದ ಕೆರೆಸಿ ರಾಶಿ ಮಾಡತೊಡಗಿದ. ನಮ್ಮಿಬ್ಬರ ಗಲೀಜುಗಳಬಂದಿ ಆರಂಭವಾಯಿತು. ಅಲ್ಲೇ ಲೋಕಾಭಿರಾಮಕ್ಕೂ ಚಾಲನೆ ಸಿಕ್ಕಿತು. 'ನೀವು ಗೊತ್ತು ಸಾರ್, ಮೊದಲು ಇದೇ ಬ್ಲಾಕ್‌ನಲ್ಲಿ ಇದ್ರಿ; ನಾನು ಚಿಕ್ಕವನಿದ್ದಾಗ ನನ್ ಜತೆ ಬ್ಯಾಡ್ಮಿಂಟನ್ ಆಡಿದ್ರಿ; ಈಗ ಅದ್ಯಾವುದೋ ಹಳ್ಳೀಲಿದೀರಂತೆ....' ಎನ್ನುತ್ತ, 'ಹೇಗೆ ಬಂತು ಅಂಕಲ್ ಈ ಪೀಜನ್ ಪೂಪ್ ಐಡಿಯಾ?' ಕೇಳಿದ. ಸರ್ರಂತ ಆರಂಭವಾಗಿದ್ದು ಈಗ ಅಂಕಲ್ ಮಟ್ಟಕ್ಕೆ ಬಂದಿದ್ದರಿಂದ ಹೇಳಲೇಬೇಕಾಯಿತು.

ಈ ಐಡಿಯಾದ ಮೂಲ ಕಾಪಿರೈಟು ದೇವನಹಳ್ಳಿಯ ಹೆಸರಾಂತ ಸಾವಯುವ ಕೃಷಿಕ ರಮೇಶರಿಗೆ ಸೇರಿದ್ದು. ಅವರು ನಂದಿಬೆಟ್ಟದ ಯಾವುದೊ ಗುಹೆಗೆ ಆಗಾಗ ಹೋಗಿ ಅಲ್ಲಿ ರಾಶಿ ಬಿದ್ದ ಬಾವಲಿ ಹಿಕ್ಕೆಗಳನ್ನು ಚೀಲದಲ್ಲಿ ತುಂಬಿ ತಂದು ತೋಟಕ್ಕೆ ಸುರಿಯುತ್ತಾರೆ. ಫುಟ್‌ಬಾಲ್ ಗಾತ್ರದ ಸಿಹಿಸಿಹಿ ಚಕೋತಾ ಬೆಳೆಯುತ್ತಾರೆ; ಟಿಪ್ಪೂ ಕಾಲದ ಒರಿಜಿನಲ್ ಚಕೋತಾ ತಳಿಯನ್ನು ಈಗಲೂ ರಕ್ಷಿಸಿಕೊಂಡು ಬಂದ ಹೆಗ್ಗಳಿಕೆ ಅವರದ್ದು. ಚಕೋತಾ ಗಿಡಗಳಿಗೆ ಅವರು ಸುರಿಯುವ ಬಾವಲಿ ಹಿಕ್ಕೆ ಕೂಡ ಟಿಪ್ಪೂ ಕಾಲದ್ದೇ ಇರಬೇಕು.

ರಮೇಶ ಪ್ರೀತಿಯಿಂದ ಕೊಟ್ಟ ಹಣ್ಣನ್ನು ತಿಂದು ಅದರ ಬೀಜಗಳನ್ನು ಸಸಿ ಮಾಡಿ ನಾನೂ ಮುತುವರ್ಜಿಯಿಂದ ಬೆಳೆಸಿದೆ. ಆ ಸಸಿಗಳು ಏನೇ ಮಾಡಿದರೂ ಮೊಣಕಾಲೆತ್ತರ ಮೀರಿ ಬೆಳೆಯಲು ಒಪ್ಪಲಿಲ್ಲ. ಇದರ ತಳಿಗುಣದಲ್ಲಿ ಬಾವಲಿ ಹಿಕ್ಕೆಯ ರಂಜಕವೇ ಸೇರಿರಬೇಕು, 'ಅದನ್ನೇ ತನ್ನಿ' ಎಂದು ಆರ್ಡರಿಸಿದ್ದಳು ನನ್ನ ಶ್ರೀಮತಿ. ಸೌಗಂಧಿಕಾ ಪುಷ್ಪವನ್ನು ತಾರೆಂದು ದ್ರೌಪದಿ ಭೀಮಸೇನನನ್ನು ಕೋರಿದ ಹಾಗೆ.



ಈ ಬಾವಲಿಗಳು ಭಲೇ ಮೋಸ. ನಮ್ಮ ತೋಟಕ್ಕೆ ಇವು ಪ್ರತಿರಾತ್ರಿಯೂ ಭೇಟಿ ಕೊಡುತ್ತವೆ. ಸಪೋಟಾ, ಮಾವು, ಅಮಟೆ ಗಿಡಗಳಲ್ಲಿ ಹಣ್ಣು ಯಾವುದು, ಕಾಯಿ ಯಾವುದು ಅನ್ನೋದು ನಮಗೆ ಗೊತ್ತಾಗದಿದ್ದರೂ ಬಾವಲಿಗಳು ಕಗ್ಗತ್ತಲ ರಾತ್ರಿಯಲ್ಲೂ ಹಣ್ಣುಗಳನ್ನು ಪತ್ತೆ ಹಚ್ಚಿ ಅರ್ಧರ್ಧ ಕಚ್ಚಿ ತಿಂದು ಮಾಯ ವಾಗುತ್ತವೆ. ಎಲ್ಲಿಗೆ ಮಾಯವಾಗುತ್ತವೆ ಎಂಬುದರ ಪತ್ತೆಗೆಂದೇ ರೇಡಿಯೊ ಕಾಲರ್ ಹಾಕಬೇಕು. ನಮ್ಮ ನಾಯಿಗೆ (ಕಾಫಿ) ಮಾಮೂಲಿ ಕಾಲರ್ ಹಾಕಬೇಕೆಂದರೂ ಏನೆಲ್ಲ ಪೂಸಿ ಹೊಡೆಯಬೇಕು. ಆಮಿಷ ತೋರಿಸಬೇಕು. ಇನ್ನು ಕಣ್ಣಿಗೇ ಕಾಣದ ಬಾವಲಿಗೆ?

ಅಲ್ಲಿ ಇಲ್ಲಿ ಸುಮಾರು ತನಿಖೆ ಮಾಡಿದ ಮೇಲೆ ಅವುಗಳ ರೊಟೀನ್ ಗೊತ್ತಾಯಿತು. ರಾತ್ರಿಯೆಲ್ಲ ಹಳ್ಳಿಯ ತೋಟದ ಮನೆಗಳ ಸುತ್ತ ಗಸ್ತು ಸುತ್ತುವ ಅವು ಹಗಲಲ್ಲಿ ಬೆಂಗಳೂರು ಸೇರುತ್ತವೆ. ನಮ್ಮ ಆಸುಪಾಸಿನ ಹಳ್ಳಿಯವರು ದಿನವೂ ಬೆಳಿಗ್ಗೆ ಬಸ್ ಏರಿದರೆ ಇವು ತುಸು ನಸುಕಿನಲ್ಲೇ ಏರಿಯಲ್ ರೂಟ್‌ನಲ್ಲಿ ಬೆಂಗಳೂರಿಗೆ ಹೋಗುತ್ತವೆ. ಹಾಗಿದ್ದರೆ ಅವೂ ಗುಮಾಸ್ತರಂತೆ ಕಚೇರಿಗೆ ಹೋಗಿ ಹಗಲಿಡೀ ನಿದ್ದೆ ಮಾಡುತ್ತವೆಯೊ ಕೇಳಬೇಡಿ. ಸೀದಾ ಅವು ಬೆಂಗಳೂರಿನ ಪೊಲೀಸ್ ಕಮೀಶನರ್ ಕಚೇರಿಗೆ ಹೋಗುತ್ತವೆ. ಕಚೇರಿಯ ಹಿಂಭಾಗದ ಮರಗಳ ಮೇಲೆ ತೂಗು ಬೀಳುತ್ತವೆ. ಒಂದೇ ಬ್ರಾಂಚ್‌ನಲ್ಲಿ, ಒಂದೇ ಕೆಲಸಕ್ಕೆ ಜೋತುಬಿದ್ದಿರುತ್ತವೆ. ಕಚೇರಿ ವೇಳೆಯಲ್ಲಿ ಓತ್ಲಾ ಹೊಡೆಯುತ್ತವೆ, ಗುಂಪುಗಾರಿಕೆ ಮಾಡುತ್ತವೆ, ಪಾಲಿಟಿಕ್ಸ್ ಮಾಡುತ್ತವೆ, ಲವ್ ಮಾಡುತ್ತವೆ, ನಿದ್ದೆ ಮಾಡುತ್ತವೆ. ಮತ್ತೆ ಅವು ಪದೇ ಪದೇ ಯಾಕೆ ಮುಖ ಪರಚಿಕೊಳ್ಳುತ್ತವೆ, ತಿನ್ನಬಾರದ್ದನ್ನು ಏನಾದರೂ ತಿನ್ನುತ್ತವೆಯೇ ಕೇಳಬೇಡಿ. ತಲೆಕೆಳಗಾಗಿ ಜೋತಾಡುತ್ತ ಹಿಕ್ಕೆ ಹಾಕುವ ಪ್ರಾಣಿ ಹಾಗೆಲ್ಲ ಮಾಡುವುದು ಅನಿವಾರ್ಯವೇ ಹೌದು.

ಬಾವಲಿ ಗೊಬ್ಬರ ಅಲ್ಲಿ ಹೇರಳ ಸಿಕ್ಕೀತು ನಿಜ. ಆದರೆ ಪೊಲೀಸ್ ಕಮೀಶನರ್ ಕಚೇರಿಯೆಂದರೆ ತೀರಾ ಬಿಗಿ ಕಾವಲಿನ ಕ್ಷೇತ್ರ. ಅಲ್ಲಿಂದ ಏನಾದರೂ ಎತ್ತಬೇಕೆಂದರೆ ಭಾರೀ ಪ್ರಭಾವೀ ಕುಳಗಳಿಂದ ಮಾತ್ರ ಸಾಧ್ಯ. ಈ ಹಿಂದೆ ಅಲ್ಲಿದ್ದ ದಪ್ಪನ್ನ ಗಂಧದ ಮರಗಳನ್ನು ಯಾರೋ ಕತ್ತರಿಸಿ ಸಾಗಿಸಿದ್ದು ಬಿಟ್ಟರೆ ಬೇರೆ ಚಿಕ್ಕಪುಟ್ಟ ಚೌರ್ಯಗಳು ಯಾವ ಪತ್ರಿಕೆಯಲ್ಲೂ ವರದಿಯಾಗಿಲ್ಲ. ಹಿಂಬಾಗಿಲ ಮೂಲಕ ಬಾವಲಿ ಹಿಕ್ಕೆಯನ್ನು ಹೊರಟರೆ ಯಾರ್‍ಯಾರಿಗೆ ಎಷ್ಟೆಷ್ಟು ಕೊಡಬೇಕೊ? ಮುಂಬಾಗಿಲಲ್ಲೇ ಹೋಗಿ ಕಮೀಶನರ್ ಸಾಹೇಬರ ಅನುಮತಿ ಕೇಳಿದರೂ ಕಷ್ಟ ಕಾರಣ ಹೇಳಬೇಕು. ನಂದಿಬೆಟ್ಟದ ಭೂಗೋಳ, ಟಿಪ್ಪೂ ಸುಲ್ತಾನನ

ಇತಿಹಾಸ ಎಲ್ಲ ಹೇಳಬೇಕು. ಬಾವಲಿ ಹಿಕ್ಕೆಗೆ ಅಷ್ಟೆಲ್ಲ ಮಹತ್ವ ಇದೆಯೆಂದು ಗೊತ್ತಾದರೆ ಅದನ್ನು ಪುಕ್ಕಟೆ ಒಯ್ಯಲು ಬಿಟ್ಟಾರೆಯೆ? ಹಿಕ್ಕೆರಾಶಿಯ ಎಸ್ಟಿಮೇಶನ್ನು, ಟೆಂಡರು ಗಿಂಡರು ಎಂದೆಲ್ಲ ರಗಳೆಗಳು ಆರಂಭವಾಗುತ್ತವೆ. ಆ ವಿಚಾರ ಬಿಟ್ಟೆ.

ಈಗ ಟೆಕ್ಕಿಯ ನೆರವಿನಿಂದ ಪಾರಿವಾಳಗಳ ಗೊಬ್ಬರವನ್ನು ಹೇಗೂ ತುಂಬಿದ್ದಾಯಿತು. 'ಬಟ್ ಅಂಕಲ್ ಇದು ಮೋಸ ಅಲ್ವಾ?' ಅಂದ ಟೆಕ್ಕಿ. ನನಗೆ ಕೋಪ ಬಂದಂತಾಯಿತು. ಇವನ ಪಾರ್ಕಿಂಗ್ ಜಾಗವನ್ನು ಕ್ಲೀನ್ ಮಾಡಿದ್ದಕ್ಕೆ ಥ್ಯಾಂಕ್ಸ್ ಅನ್ನೋ ಬದಲು ಮೋಸ ಅಂತಾನಲ್ಲ? 'ಹೇಗಯ್ಯ ಮೋಸ?' ಎಂದು ಕೇಳಿದೆ.

'ನೀವು ಬ್ಯಾಟ್ ಪ್ರೂಪ್ ಬದಲು ಪೀಜನ್ ಪ್ರೂಪ್ ಹಾಕಿದರೆ ಚಕೋತ ಗಿಡಕ್ಕೆ ಮೋಸ ಅಲ್ವಾ?' ಎಂದು ಕೇಳಿದ. ಸದ್ಯ!

'ಅಷ್ಟೇತಾನೆ? ಚಕೋತವನ್ನು ನಾನು ನೋಡ್ಕೋತೀನಿ ಬಿಡು. ಆದರೆ ನನ್ನ ಶ್ರೀಮತಿ ಎಂದಾದರೂ ಈ ಕಡೆ ಬಂದಾಗ ನೀನು ಮಾತ್ರ ಈ ವಿಚಾರ ಗುಟ್ಟಾಗಿಡು' ಎಂದು ಹೇಳಿ ಕಾರು ಏರಿದೆ.

✵

**ವೀಸಾ ಪವರ್!**

ಪಾಕಿಸ್ತಾನದ ಮೃಗಾಲಯದಲ್ಲಿ ಒಂದು ಹಸಿದ ಸಿಂಹಕ್ಕೆ ನಿತ್ಯ ಸಿಗುತ್ತಿದ್ದುದು ಕೇವಲ ೨ ಕಿಲೊ ಮಾಂಸ.

ಒಂದು ದಿನ ದುಬಾಯಿನಿಂದ ಬಂದ ಅಲ್ಲಿನ ಮೃಗಾಲಯದ ಅಧಿಕಾರಿ ಈ ಸಿಂಹವನ್ನು ನೋಡಿದರು. ಕರುಣೆ ಉಕ್ಕಿಬಂದು ತಮ್ಮ ಮೃಗಾಲಯಕ್ಕೆ ಕೊಂಡೊಯ್ಯುವುದಾಗಿ ಹೇಳಿದರು.

ಸುದ್ದಿ ಕೇಳಿ ಸಿಂಹಕ್ಕೆ ಸಖತ್ ಖುಷಿ. ವ್ಹಾ! ದುಬಾಯ್ ಮೃಗಾಲಯ. ಎ.ಸಿ. ಬೋನು. ಪ್ರತಿ ದಿನ ಒಂದೆರದು ಮೇಕೆ ತಿನ್ನಲು. ಇತರ ಸೌಲಭ್ಯಗಳು - ಸಿಂಹ ಕನಸು ಕಾಣತೊಡಗಿತು.

ಸಿಂಹ ದುಬಾಯ್ ತಲುಪಿತು. ಬೆಳಗ್ಗೆ ನಾಷ್ಟಕ್ಕೆ ಎಂದು ಒಂದು ಸುಂದರವಾಗಿದ್ದ ಒಂದು ಬ್ಯಾಗ್ ಕೊಡಲಾಯಿತು. ಲಗುಬಗೆಯಿಂದ ಸಿಂಹ ಅದನ್ನು ತೆಗೆದರೆ ಅದರಲ್ಲಿ ಎರಡು ಬಾಳೆಹಣ್ಣುಗಳು. ನನ್ನ ಹೊಟ್ಟೆ ಕೆಟ್ಟಿರಬಹುದು ಎಂದುಕೊಂಡು ಈ ಡಯಟ್ ಎಂದು ಸಿಂಹ ಭಾವಿಸಿತು. ಆದರೆ ಮರುದಿನ ಅದೇ ಡಯಟ್. ಅದರ ಮರುದಿನ ಸಹ ಬಾಳೇಹಣ್ಣು.

ಮತ್ತೆ ಅದೇ ಸುಂದರ ಬ್ಯಾಗ್ ಕೊಡಲು ಬಂದ ಡೆಲಿವೆರಿ ಬಾಯ್‌ನನ್ನು ಹಿಡಿದ ಸಿಂಹ "ನಾನು ಯಾರೆಂದು ಕೊಂಡಿದ್ದೀಯಾ? ನಾನು ಸಿಂಹ, ಕಾಡಿನ ರಾಜ. ಏನೀ ನಿಮ್ಮ ವ್ಯವಸ್ಥೆ? ನನಗೆ ಬಾಳೆಹಣ್ಣು ಕೊಡುವುದೆಂದರೆ ಏನು ಅರ್ಥ? ನಿಮಗೇನು ಬುದ್ಧಿ ಕೆಟ್ಟಿದೆಯೆ?" ಎಂದು ಚೀರಾಡತೊಡಗಿತು.

"ಸರ್ ನೀವು ಕಾಡಿನ ರಾಜ ಎಂದು ನನಗೆ ಗೊತ್ತು. ಆದರೆ ಮಂಗನ ವೀಸಾದ ಮೇಲೆ ನಿಮ್ಮನ್ನು ಇಲ್ಲಿಗೆ ಕರೆತರಲಾಗಿದೆ. ನಾನು ಅಸಹಾಯಕ" ಎಂದ ಡೆಲಿವೆರಿ ಬಾಯ್ ವಿನೀತನಾಗಿ.

# ಲೋಕ್ ಪಾಲ್ಗೆ ಹಾಲಾಹಲದ ಮಿಶ್ರಣ

**- ಇ.ಆರ್. ರಾಮಚಂದ್ರನ್**

**ಅ**ಣ್ಣಾ ಹಜಾರೆ ಉಪವಾಸ ಸತ್ಯಾಗ್ರಹ ಮುರಿಯುವುದನ್ನು ಟೀವಿಯಲ್ಲಿ ನೋಡುವುದಕ್ಕೆ ಲಕ್ಷಾಂತರ ಜನ ಕಾದು ಕುಳಿತಿದ್ದರು, ನಮ್ಮ ಅಜ್ಜಿ ಸಹ.

ಸಣ್ಣ ಹುಡುಗಿ ತಂದು ಕೊಟ್ಟ ಜೂಸ್ ಕುಡಿದು ಅಣ್ಣಾ ಉಪವಾಸ ಅಂತ್ಯಗೊಳಿಸಿದರು.

'ನಾನು ಚಿಕ್ಕ ಹುಡುಗಿಯಾಗಿದ್ದಾಗ ಗಾಂಧೀಜಿ ತಮ್ಮ ಉಪವಾಸ ವ್ರತ ಮುರಿದಾಗ ಪತ್ರಿಕೆಯಲ್ಲಿ ಫೋಟೋ ಬರೋದು. ಈಗ ಅದು ಮುಗಿದ ಹಾಗೇನೇ ನೋಡಬಹುದು' ಅಂತ ಅಜ್ಜಿ ಜ್ಞಾಪಿಸಿಕೊಂಡರು.

'ಈಗಿನ ಕಾಲದ ಗಾಂಧಿ ಅಂದ್ರೆ ಅಣ್ಣಾ ಹಜಾರೇನೆ ಅಜ್ಜಿ.

'ಅದು ಸರೀ... ಅಣ್ಣನ ಹೋರಾಟಕ್ಕೆ ಇದ್ದಕ್ಕಿದ್ದಂತೆ ಅಮ್ಮ, ಅಪ್ಪ, ತಂಬಿ ಎಲ್ಲಾ ಸೇರ್ಕೊಂಡು ಬಿಟ್ಟಿದ್ದಾರಲ್ಲೋ !'

**ಅಣ್ಣನ ಹೋರಾಟಕ್ಕೆ ಅಮ್ಮ, ಅಪ್ಪ, ತಂಬಿಯರ ಬೆಂಬಲ!**

'ಸರಿಯಾಗಿ ಬಿಡಿಸಿ ಹೇಳು, ಅಜ್ಜಿ.'

'ಜಯಲಲಿತಾನ ಅಮ್ಮಾಂತ ಕರೀತಾರಲ್ಲ ...ಅವಳ ಮೇಲೆ ಕೇಸು ನಡೆಸೋದಕ್ಕೆ ಒಂದಲ್ಲ, ಎರಡಲ್ಲ, ಮೂರು ಕೋರ್ಟುಗಳಿವೆ. ಇನ್ನೂ ಹತ್ತಾರು ಕೇಸ್ಗಳು ನಡೀತಾನೇ ಇವೆ. ಇನ್ನು ಮಾಯಾವತಿಯ ವರಮಾನಕ್ಕೂ ಅವಳ ಹತ್ತಿರ ಇರುವ ಆಸ್ತಿಗೂ ಸಂಬಂಧವೇ ಇಲ್ಲ, ಖಜಾನೆ ಲೂಟಿ ಮಾಡಿದ ಹಾಗೆ ಇದೆ ಅಂತ ಕೇಸ್ಗಳು ಕೂಡಾ ಇದೆ. ಇವರಿಬ್ಬರೂ ಅಕ್ಕ ತಂಗೀಯರು ಅಂತ ಅನ್ಸುತ್ತಪ್ಪಾ ನನ್ಗೇನೋ....!'

'ಹ್ಯಾಗೆ ಅಜ್ಜಿ? '

'ಕೋರ್ಟು, ಕಛೇರಿ ಭ್ರಷ್ಟಾಚಾರದ ಕೇಸ್ಗಳ ವಿಷಯದಲ್ಲಿ! ಈಗ ಹಜಾರೆ ಅವರ ಆಂದೋಳನಕ್ಕೆ ನನ್ನ ಸಂಪೂರ್ಣ ಬೆಂಬಲವಿದೆ ಅಂತಾಳೆ ಅಮ್ಮ! ಇವರೆಲ್ಲ ಖಜಾನೆ ಲೂಟಿ ಹೊಡೆದು, ಹಜಾರೆಗೆ ಏನು ಸಮರ್ಥನೆ ಕೊಡೋದು ಇವರ ತಲೆ!'

'ಹಹ, ಕರೆಕ್ಟ್ ಅಜ್ಜಿ'

'ಇನ್ನು ಅಣ್ಣ-ತಮ್ಮಂದಿರ ವಿಚಾರ... ತಮಿಳುನಾಡಿನ ಕರುಣಾನಿಧಿ ನಮ್ಮ ಯಡಿಯೂರಪ್ಪನವರನ್ನು ಎನ್ನಡಾ ತಂಬಿ ಅಂತ ಕರೀತಾರೆ ಅಲ್ವೇನೋ ?'

'ನಿಜ ಅಜ್ಜಿ.

'ಅವರಿಬ್ಬರೂ 'ಅಣ್ಣ-ತಂಬಿ' ಜೋಡಿ'. 'ಅವರಿಬ್ಬರೂ ಅವರ ಜೀವನವನ್ನೇ ಅವರವರ ಫ್ಯಾಮಿಲಿ ಮತ್ತು ಎಕ್ಸ್ಟೆಂಡೆಡ್ ಫ್ಯಾಮಿಲಿಯ ಏಳಿಗೆಗೆ ಮುಡಿಪಾಗಿಟ್ಟಿದಾರೇನೋಂತ

ಅನ್ನುತ್ತೆ. 'ಅಣ್ಣ', ಪಾಪ.... ಲೆಕ್ಕಕ್ಕೆ ಇರುವ ಇಬ್ಬಿಬ್ಬ ಹೆಂಡತಿಯರೂ, ಅವರ ಮಕ್ಕಳು ಅವರ ಚಿಕ್ಕಪ್ಪಂದಿರು, ಮತ್ತು ಅವರ ಮೇಕೆ, ಆಡು, ಕೋತಿ ಮತ್ತು ಅವುಗಳ ಸಂಸಾರಗಳನ್ನು ಮುಂದೆ ಏಳು ಜನ್ಮ ಚೆನ್ನಾಗಿರಲಿ ಅಂತ ಸೀಎಮ್ ಪದವೀನ ಮುಡುಪಾಗಿಟ್ಟು ದುಡೀತಿದ್ದರೆ, ತಮ್ಮ ತನ್ನ ಮಕ್ಕಳಿಗೆ ಆಸ್ತಿ– ಪಾಸ್ತಿ ಮಾಡೋದರಲ್ಲೇ ಕಾಲ ಕಳೀತಾ ಇದಾರೆ! ಅವೆಲ್ಲವನ್ನೂ ದೇವರು ಸರಿಮಾಡಲಿ ಅಥವಾ ನೋಡದೆ ಕಣ್ಣು ಮುಚ್ಚಿ ಕೂರ್ಲಿ ಅಂತ ಪದೇ ಪದೇ ದೇವಸ್ಥಾನಕ್ಕೆ ಹೋಗಿ ಜ್ಞಾಪಿಸುವುದು, ಇದೇ ಕೆಲಸ ತಮ್ಮನಿಗೆ!'

'ಒಂದೊಂದು ಸಲ ಇವರೆಲ್ಲಾ ಮಿನಿಸ್ಟ್ರುಗಳಾಗೋದು ಇದೇ ಕೆಲಸಕ್ಕೇನಾ ಅಂತ ಅನ್ನುತ್ತೆ, ಅಜ್ಜಿ.'

'ಆದ್ರೆ ಅವರು ಹಜಾರೆಗೆ, ಅವರ ಹೋರಾಟಕ್ಕೆ ತಮ್ಮ ಸಂಪೂರ್ಣ ಬೆಂಬಲ ಅಂತ ಘೋಷಿಸಿದ್ದಾರಲ್ಲೋ!'

'ಹೌದು.... ಆದ್ರೆ ತಮ್ಮ ವಿರುದ್ಧ ಹೇರಿರುವ ಭ್ರಷ್ಟಾಚಾರದ ಕೇಸ್ಗಳನ್ನು ಸಂತೋಷ್ ಹೆಗ್ಡೆಯವರಿಗೆ ಮುಟ್ಟೋದಕ್ಕೂ ಬಿಟ್ಟಿಲ್ಲ!'

'ಇನ್ನು ಎಕ್ಸ್–ಸೀಎಂ ಆಗಿದ್ರಲ್ಲ ನಮ್ಮ ಗೌಡ್ರ ಮಗಾ... "ಗಾಂಧೀಜಿ ಬದುಕಿದ್ದಿದ್ದರೆ ಅವರೂ ಭ್ರಷ್ಟಾಚಾರಿಯಾಗಿ ಇರ್ತಿದ್ರು" ಅಂತ ಧೈರ್ಯವಾಗಿ ಹೇಳ್ತಾರಲ್ಲ!'

'ಅಂದ್ರೆ ಒಬ್ಬೊಬ್ಬ ಮಗನಿಗೂ ನಾಲ್ಕೈದು ಸೈಟು, ಐದಾರು ಎಜುಕೇಷನ್ ಟ್ರಸ್ಟ್‌ಗಳು, ಅದಕ್ಕೆ ಕೋಟಿ ಕೋಟಿ ಸಿಗುವ ಗ್ರಾಂಟ್‌ಗಳು ಇಟ್ಕೊಂಡು, ಗಾಂಧೀ ಟೋಪೀನೋ ಇಲ್ಲ ಬೇರೇನೋ ಕ್ಯಾಪ್ ಹಾಕಿಕೊಂಡು ಎಲ್ಲರಿಗೂ ಟೋಪೀ ಹಾಕುತ್ತಾ ಓಡಾಡ್ಕೊಂಡು ಇರೋವ್ರು ಅಂತ ಅರ್ಥ!'

'ನಮ್ಮ ಸಾಫ್ಟ್‌ವೇರ್ ಸರಸ್ವತಮ್ಮ ಹೇಳ್ತಾ ಇದ್ದರು....'

'ಇಷ್ಟು ವಯಸ್ಸಾದ ಮೇಲೆ ಮುದುಕಿ ಸಾಫ್ಟ್‌ವೇರ್ ಓದಿದೆಯಾ?'

'ಗೂಬೆ! ಅವರ ಮೊಮ್ಮಕ್ಕಳಿಬ್ಬರೂ ಸಾಫ್ಟ್‌ವೇರ್‌ನಲ್ಲಿ ಕೆಲಸಾ.... ಅದಕ್ಕೆ ಅವರನ್ನು ಹಾಗೆ ಕರೆಯೋದು.'

'ಹಾರ್ಡ್‌ವೇರ್‌ನವರು ಯಾರಾದರು ಇದ್ದಾರಾ ನಿನ್ನ ಗ್ರೂಪ್‌ನಲ್ಲಿ?'

'ಯಾಕಿಲ್ಲ? ಹಾರ್ಡ್‌ವೇರ್ ಹರಿಣಿ ಇದಾರಲ್ಲಾ, ಅವರ ಗಂಡ ಹಾರ್ಡ್‌ವೇರ್ ಷಾಪ್ ಇಟ್ಟಿದ್ದಾರೆ.'

'ಅಜ್ಜಿ! ನಿನಗೆ ಇದೇ ಕೆಲ್ಸಾನಾಂತ. ಎಲ್ಲರಿಗೂ ಅಡ್ಡ ಹೆಸರಿಡೋದು.'

'ನಿನ್ನ ತಲೆ! ನನ್ಮಾತ್ ಕೇಳು.. ಸೀತಮ್ಮ ನಿನ್ನೆ ದೇವಸ್ಥಾನದಲ್ಲಿ ಹೇಳ್ತಿದ್ರು.. ಮೈಸೂರ್ನಲ್ಲಿ ಪೆಟ್ರೋಲ್ಗೆ ಸೀಮೆಎಣ್ಣೆ ಸೇರ್ಸೋ ಫ್ಯಾಕ್ಟ್ರಿ ಇದೆಯಂತೆ. ಆಟೋರಿಕ್ಷಾದವರೆಲ್ಲಾ ಅಲ್ಲೇ ಪೆಟ್ರೋಲ್ ತುಂಬಿಸ್ಕೊಳ್ಳೊದು. ಅವರೆಲ್ಲಾ ಅಣ್ಣಾ ಹಜಾರೆಗೆ ಬೆಂಬಲ ಕೊಡ್ತೀವಿ. ನೀವು ಏನೂ ಯೋಚಿಸಬೇಡಿ ನಾವು ಇದೀವಿ. ಧನ ಸಹಾಯ ಕೂಡ ಮಾಡ್ತೀವಿ ಅಂತ

ಹೇಳಿದಾರಂತೆ! ಹೀಗೆ ಆದರೆ ಮುಂದೆ ಅಕ್ಕಿಗೆ ಪ್ಲಾಸ್ಟಿಕ್ ಚೂರು, ಬಿಳಿಕಲ್ಲು ಸೇರಿಸುವವರು, ಕಾಫಿ ಬೀಜಕ್ಕೆ ಹುಣಿಸೆ ಬೀಜ ಹಾಕೋವ್ರು ಎಲ್ಲಾ ಸೇರ್‍ಕೊಳ್ತಾರೆ !'

'ಈ ಕಲಬರಿಕೆ, ಕಳ್ಳಭಟ್ಟಿ ಮಿಕ್ಸ್ಚರ್ ಮಾಡೋವ್ರು ಮತ್ತು ಗವರ್ನಮೆಂಟು ಸೇರ್‍ಕೊಂಡು ಅಣ್ಣಾ ಹಜಾರೆ ಅವರ ಆಂದೋಳಾನ ತಿಥಿ ಮಾಡ್ತಾರೇ ಅಂತ ಅನ್ಸುತ್ತೆ ಅಜ್ಜಿ.'

'ಗವರ್ನಮೆಂಟು ಒಪ್ಕೊಂಡಿದಾರಲ್ಲೋ. ಕಮಿಟಿಯೆಲ್ಲಾ ಮಾಡಿದಾರೆ?'

'ನಿಜಾ. ಆದ್ರೂ ಇಷ್ಟು ವರ್ಷ ಭ್ರಷ್ಟಾಚಾರದಲ್ಲಿ ಇದ್ಕೊಂಡು ಇದ್ದಕ್ಕಿದ್ದಂತೆ ಮಡಿಯಾಗಿ ಶುಚಿಯಾಗಿ ಇರಿ ಅಂದ್ರೆ ಮನಸ್ಸು ಒಪ್ಪುತ್ತಾ? ಅದಕ್ಕೇ ಏನಾದ್ರೂ ಹಜಾರೆ ಅವರ ಕಮಿಟಿಯಲ್ಲಿರುವರ ಮೇಲೆ ಒಂದಲ್ಲ ಒಂದು ಸುಳ್ಳು ಅಪವಾದ ಹೊರಿಸಿ ಕಿತಾಪತಿ ಮಾಡ್ತಿದಾರೆ ಅಂತ ಅನ್ಸುತ್ತೆ. ಪಾರ್ಲಿಮೆಂಟ್ನಲ್ಲಿ ಈ ಬಿಲ್ ಫೇಲ್ ಮಾಡಿಸ್ಬಿಡುತ್ತಾರೆ ನೋಡ್ಕೊ.

ಕೊನೆಗೂ ಕಳ್ಳರೇ ಗೆಲ್ತಾರೆ ಅಂತೀಯಾ? ಕೊನೆಗೆ ಇನ್ನೊಂದು ವಿಷಯಾನಪ್ಪ.'

'ಏನಜ್ಜಿ ಅದು?'

'ನಮಗೆಲ್ಲಾ 'ವೋಟ್ ಹಾಕಿ, ವೋಟ್ ಹಾಕಿ' ಅಂತ ದಿನ ಬೆಳಗಾದ್ರೆ ಕೊರೀತಾ ಇರ್ತಾರೆ ಪಾಲಿಟೀಷಿಯನ್ಸ್ ಹೌದೋ ಅಲ್ವೋ?'

'ನಿಜ.. 'ಪ್ರಜಾಪ್ರಭುತ್ವದಲ್ಲಿ ಸಿಕ್ಕಿರುವ ನಿಮ್ಮ ಜನ್ಮಸಿದ್ಧ ಹಕ್ಕು' ಅಂತ ಭಾಷಣ ಬಿಗೀತಾರೆ !'

'ಹಾಗಿದ್ದೂ ನಮ್ಮ ಪ್ರಧಾನಿ ಮನಮೋಹನ್ ಸಿಂಗ್ ಅವರೇ ವೋಟ್ ಮಾಡ್ಲಿಲ್ವಲ್ಲೋ !!'

ಅಜ್ಜಿ ದೂಸ್ರಾಗೆ ನಾನು ಕ್ಲೀನ್ ಬೋಲ್ಡ್ !

✵

## ಸ್ನೇಹ

ನಾನು ಮಾತಾಡುತ್ತೇನೆ ನೀನು ಕೇಳಿಸಿಕೊಳ್ಳುತ್ತೀಯ
ಒಳ್ಳೆಯ ಸ್ನೇಹ

ನೀನು ಮಾತಾಡುತ್ತೀಯ ನಾನು ಕೇಳಿಸಿಕೊಳ್ಳುತ್ತೇನಿ
ಅತ್ಯುತ್ತಮ ಸ್ನೇಹ

ನಾನು ಏನೂ ಮಾತಾಡುವುದಿಲ್ಲ ನೀನು
ತಿಳಿದುಕೊಳ್ಳುತ್ತೀಯ
ಅದ್ವಿತೀಯ ಸ್ನೇಹ

# ಮಿಸ್ಡ್ ಕಾಲ್ ಮಗ ಎಂಬ ಲೋಕಲ್ ವಿಕಿಲೀಕ್ ಪ್ರಕರಣವು

**- ಬಿ.ಕೆ. ಗಣೇಶ್**

**ಅ**ವತ್ತು ಸಂಡೇ. ನನ್ನ ಪಾಲಿಗೆ ಅದು ಲೆಟರ್‌ಶಃ sonಡೆ. ಪೂರ್ತಿ ದಿನ ಮಗನ ಡೈರೆಕ್ಷನ್. ಅವನು ಹೇಳಿದ ಜಾಗಕ್ಕೆ ಔಟಿಂಗ್, ಊಟಕ್ಕೆ ಅವನು ಹೇಳಿದ್ದೇ ಮೆನು. ಕಡೆಗೆ ನಾನು ಯಾವ ಚಾನೆಲ್ ನೋಡಬೇಕೆಂದು ಡಿಸೈಡ್ ಮಾಡೋದೇ ಅವನು.

'ಸಂಡೇ ಮಗನ ಮಾತು ಕೇಳ್ತೀರಿ. ನನ್ನ ಮಾತು ಯಾವಾಗ ಕೇಳ್ತೀರಿ' ಅಂತ ನನ್ನ ಮಗಳು ಹಾಡು ಹೇಳುತ್ತಾಳೆ. ಅದಕ್ಕಾಗಿ ಡಾಟರಿಗೆ ಸಾಟರ್‌ಡೇ ಫಿಕ್ಸ್ ಮಾಡಿದ್ದೇನೆ. ಇನ್ನು ಉಳಿದ ಐದು ದಿನಗಳಿಗೆ ಧಣಿ–ಮನೆಯಾಕೆ. ಇನ್ನು ನನಗೆ ಬೇರೆ ದಿನ ಯಾಕೆ? (ಆದರೂ) ನಮ್ಮಲ್ಲಿ ಡೆಮಾಕ್ರಸಿ ಇದೆ ಅಂತ ನಾನು ಬೀಗುತ್ತೇನೆ.

ಮತ್ತೆ ವಿಷಯಕ್ಕೆ ಬರುತ್ತೇನೆ. ಅವತ್ತು ಸಂಡೇ. ತಡವಾಗಿ ಎದ್ದ ಮಗ ಬೆಡ್‌ರೂಮಿಂದಲೇ ಮಿಸ್ಡ್ ಕಾಲ್ ಕೊಟ್ಟ. ಏನು 'ಕಾಲ್'ವಪ್ಪಾ? ಕೂತಲ್ಲಿಂದಲೇ ಕೇಳಿದೆ; 'ಏನೋ, ಮಗರಾಯ— ಏನ್ ಸಮಾಚಾರ?'

'ನಾನ್ ಇವತ್ತು ಬೆಡ್‌ರೂಮ್ ಬಿಟ್ಟು ಹೊರಗೆ ಬರಲ್ಲ' ಎಂದು ಅಲ್ಲಿಂದಲೇ ಕೂಗಿದ.

'ಗುಡ್ ಐಡಿಯಾ ಕಣೋ' ಎಂದೆ. ಇವತ್ತಾದರೂ ನಾನು ಮುಕ್ತ ಮುಕ್ತ ಮುಕ್ತ ಎಂದು ಮನದಲ್ಲೇ ಹೇಳಿಕೊಂಡೆ.

'ಹೋಗ್ಲಿ, ಯಾಕೆ ಅಂತಾದರೂ ಕೇಳ್‌ಬಾರ್ದಾ?' ಅಂತ ಬೆಡ್ಡಿಂದಲೇ ಬಡಬಡಿಸಿದ.

'ಸರಿಬಿಡು, ಯಾಕೆ ?'

'ನಂದು ಸತ್ಯಾಗ್ರಹ. ನ್ಯಾಯ ಸಿಗೋ ತನಕ ಬೆಡ್‌ರೂಮಿಂದ ಹೊರಗೆ ಬರಲ್ಲ, ಊಟ ಮಾಡೊಲ್ಲ' ಅಂತ ನಿರ್ಧಾರ ಪ್ರಕಟಿಸಿಬಿಟ್ಟ.

ರಾಜಕೀಯದಲ್ಲಿ ವಿರೋಧಪಕ್ಷದ ನಾಯಕರು ಬರೋ ಥರ ಅವಳಮ್ಮ ಮಧ್ಯ ಪ್ರವೇಶಿಸಿದಳು.

'ಏನಾಯಿತು ಹೇಳೊ, ಸತ್ಯಾಗ್ರಹ ಗಿತ್ಯಾಗ್ರಹ ಎಲ್ಲ ಬೇಡ' ಎಂದು ಅಮ್ಮ ವಾದ ಮುಂದಿಟ್ಟಳು.

ಹಾಲ್‌ನಲ್ಲಿ ಕೂತಿದ್ದ ನಂಗೆ ಕೇಳುವಂತೆ ಮಗ ಬೆಡ್‌ರೂಮಿಂದಲೇ ಬೊಬ್ಬೆ ಹಾಕಿದ: ''ನೋಡು, ನಾನೇನಾದರೂ ಬೈಕ್ ಬೇಕು ಅಂತ ಕೇಳಿದ್ನಾ? ಹೊಸ ಲ್ಯಾಪ್‌ಟಾಪ್ ಬೇಕು ಅಂತ ಕೇಳಿದ್ನಾ? ಅಲ್ಲಾ ಹೊಸ ಜೀನ್ಸ್ ಬೇಕಂದನಾ.. ಇಲ್ವಲ್ಲಾ.. ಏನೋ ಸ್ವಲ್ಪ ಮಾತಾಡ್ತೀನಿ ಅಂದೆ.'

'ಅಂದ್ರೆ ನಿಂಗೆ ಮಾತಾಡೋಕೂ ಬಿಡ್ತಾ ಇಲ್ವಾ? ಯಾರಪ್ಪ ತಡೀತಾರೆ ನಿನ್ನ?' ಅಂತ ಅಮ್ಮ ಮುದ್ದುಗರೆಯಲು ಶುರು ಹಚ್ಚಿದಳು.

'ನಾನು ಕೇಳಿದ್ದು ನನ್ ಮೊಬೈಲ್ ಬಿಲ್ ಕಟ್ಟೋಕೆ. ಆಫ್ಟರಾಲ್ ಮೊಬೈಲ್ ಬಿಲ್. ಅಣ್ಣಾ ಹಜಾರೆ ಬಿಲ್ ಪಾಸ್ ಮಾಡೋಕೆ ಧರಣಿ ಕೂತ್ರೆ ಇಡೀ ದೇಶ ವ್ಹಾವ್ಹಾ ಅನ್ನುತ್ತೆ. ನಂಗೆ ನನ್ನ ವಾಕ್ ಸ್ವಾತಂತ್ರ್ಯ ಬೇಕು ಅಂತಂದ್ರೆ ಸಪೋರ್ಟ್ ಸಿಗಲ್ಲ. ನೋಡು ಮೂರು ದಿನದಿಂದ ಬರೇ ಮಿಸ್ ಕಾಲ್ ಮಾತ್ರ ಆಗುತ್ತೆ' ಅಂತ ಗೋಳು ತೋಡಿಕೊಂಡ.

'ಅಷ್ಟೇನಾ, ನಿಂಜೊತೆ ನಾನಿದ್ದೀನಿ' ಅಂತಂದ ಆಕೆ ಬಿರಬಿರನೆ ರೂಮಿನಿಂದ ಹೊರಗೆ ಬಂದಳು. ಅಣ್ಣಾಗೆ ಯಡಿಯೂರಪ್ಪ ಸಪೋರ್ಟ್ ಅಂತಂದಾಗಲೂ ನನಗೆ ಇಷ್ಟು ನಗು ಬರಲಿಲ್ಲ.

ಬಂದವಳೇ ಥೇಟ್ ಸುಷ್ಮಾ ಸ್ವರಾಜ್ ಮಾದರಿಯಲ್ಲಿ ರಪರಪನೆ ಮಾತಿನ ಬಾಣ ಬಿಟ್ಟಳು. ಎಷ್ಟೋ ಸಲ ಅವಳು ಬಾಯಿ ತೆರೆದಳೆಂದರೆ ಮನಮೋಹನ್ ಸಿಂಗ್ ಥರ ನಾನು ಬಾಯ್ಮುಚ್ಚಿ ಸುಮ್ಮನೆ ಕೂತುಕೊಳ್ಳೋದೇ ಜಾಸ್ತಿ.

'ಅಲ್ಲಾ, ಮಗ ಇಷ್ಟೊಂದು ನೊಂದುಕೊಂಡಿದ್ದಾನೆ. ಯಾಕೆ ಅಂತ ಕೇಳ್‌ಬಾರ್ದಾ? ಏನ್ ಕೇಳಿದ್ದಾನೆ, ಮೊಬೈಲ್ ಬಿಲ್ ಕಟ್ಟೋಕೆ ಹೇಳಿದ್ದಾನಷ್ಟೇ'. . . ಎಂದು ವ 'ಕಾಲ್'ತ್ತು ಶುರುಮಾಡಿದಳು.

ಒಮ್ಮೊಮ್ಮೆ ಮನಮೋಹನ್ ಸಿಂಗರಿಗೂ ಕೋಪ ಬರುತ್ತೆ ಅನ್ಸುತ್ತೆ. ನಂಗೂ ಕೋಪ ಬಂತು.

'ಅಲ್ಲ ಕಣೇ, ಏನಂತೀಯ ನೀನು. ಅವನ ಮೊಬೈಲ್ ಬಿಲ್ ಎಷ್ಟು ಬಂದಿದೆ ಅಂತ ಗೊತ್ತಾ? ಬರೋಬ್ಬರಿ ಮೂರು ಸಾವಿರ ರೂಪಾಯಿ. ಅವನೇನು ಐಎಎಸ್ ಆಫೀಸರಾ? ನೀರಾ ರಾಡಿಯಾನಾ? ಅಷ್ಟೊಂದು ಮಾತಾಡೋಕೆ? ನೋಡು. 10-15 ವರ್ಷಗಳ ಹಿಂದೆ ನನ್ ಸಂಬಳಾನೂ 3,000 ಇರಲಿಲ್ಲ. ಈಗ ಬರೇ ಮೊಬೈಲಿಗೇ ಅಷ್ಟು ಹಣ ಬೇಕಾ? ಇಷ್ಟೊಂದು ಬಿಲ್ ಕಟ್ಟೋಕೆ ಸಾಧ್ಯಾನೇ ಇಲ್ಲ. ಮೊಬೈಲ್ ಡಿಸ್‌ಕನೆಕ್ಟಾಗಲಿ ಬಿಡು...' ಅಂತ ಒಂದೇ ಉಸಿರಿನಿಂದ ಹೇಳತೊಡಗಿದೆ.

ನನ್ನ ಸಿಟ್ಟು ನೋಡಿಯೋ ಏನೋ ಅವಳೂ ಸೈಲೆಂಟಾಗಿಬಿಟ್ಟಳು.

ಅಷ್ಟರಲ್ಲಿ ಇನ್ನೊಂದು ಮಿಸ್ಡ್ ಕಾಲ್ ಬಂತು.

'ಏನೋ, ಇದು? ಬಿಲ್ ಕಟ್ಟಲ್ಲ ಅಂದ್ರೆ ಕಟ್ಟಲ್ಲ ಅಷ್ಟೇ' ಎಂದೆ ಜೋರಾಗಿ.

'ಸ್ವಲ್ಪ ಒಳಗೆ ಬರ್ತೀಯಪ್ಪ?' ಆ ದನಿಯಲ್ಲಿ ವಿನೀತತೆ ಇತ್ತೋ, ಬೆದರಿಕೆ ಇತ್ತೋ ಗೊತ್ತಾಗಲಿಲ್ಲ. ಆದರೂ ಮಗ ಅಲ್ವೇ? ರೂಮಿಗೆ ಹೋದೆ. ಥೇಟ್ ಅಣ್ಣಾ ಸ್ಟೈಲಲ್ಲೇ ದಿಂಬು ಮೇಲೆ ಇಟ್ಟ ಕೈಗೆ ತಲೆ ಒರಗಿಸಿ ಮಲಗಿದ್ದ.

'ಹೇಳೀಗ' ಅಂದೆ.

'ಅಪ್ಪಾ, ಸುಮ್ಮನೆ ರಗಳೆ ಬೇಡ. ಬಿಲ್‌ಗೆ ಕಾಸು ಕೊಟ್ಬಿಡು. ಇಲ್ಲಾಂದ್ರೆ, ಸುಮ್‌ಸುಮ್ನೆ ಮನೇಲಿ ಯುದ್ಧ ಆಗುತ್ತೆ. ಅದೆಲ್ಲ ಯಾಕ್ ಬೇಕು?' ಎಂದು ಕುಗ್ಗಿದ ದನಿಯಲ್ಲೇ ಹೇಳಿದ.

ನಾನು ಅಂಥ ವರಸೆಗೆಲ್ಲ ಬಗ್ಗೋನಲ್ಲ. ನೋಡಪ್ಪ, 'ಅವತ್ತು ಅಟ್ಟದಲ್ಲಿ ಸಿಕ್ಕಿದ್ದು ನಿನ್ನ ಕಾಲೇಜು ನೋಟ್‌ಬುಕ್. ಅದರಲ್ಲಿ ನಿನ್ನ ಹಳೆ ಲವ್ ಲೆಟರ್‌ಗಳು . ಅಮ್ಮಂಗೆ ಅದು ಗೊತ್ತಿಲ್ಲ, ಹೇಳೋದಾ?' ಗುರಿಗೇ ಬಾಣ ಬಿಟ್ಟ. ಇದೊಂದು ಲೋಕಲ್ ವಿಕಿಲೀಕ್ ಹಗರಣ ಆಗುವದಿತ್ತು.

ಸುಮ್ಮನಾಗಿಬಿಟ್ಟೆ.

''ಅಣ್ಣಾಗೆ ಬಗ್ತೀಯಾ? ವಿಕಿಲೀಕ್‌ಗೆ ಬಗ್ತೀಯಾ? ನೀನೇ ಡಿಸೈಡ್ ಮಾಡು'' ಎಂದ.

ನಂಗೆ ಮನೆ ನೆಮ್ಮದಿ ಮುಖ್ಯ. ಹೀಗಾಗಿ ಮೊಬೈಲ್ ಬಿಲ್ ಕಟ್ಟಲು ಒಪ್ಪಿದೆ. ಮನಮೋಹನ್ ಸರ್ಕಾರನೇ 2 ಜಿ ಮತ್ತು ವಿಕಿಲೀಕ್ ಮಧ್ಯೆ ಸಿಕ್ಕಿ ಒದ್ದಾಡಿರಬೇಕಾದರೆ 3,000 ರೂ ಯಾವ ಮಹಾ ಎನ್ನುವುದು ನನ್ನ ವಾದ. ನೀವೇನಂತೀರಿ?

ಆದರೂ ಈ ಕಾಲದಲ್ಲಿ ಗಾಂಧೀಜಿ ಇರಬೇಕಿತ್ತು ಅಂತದ್ಕೊಂಡೆ. ನಾನೂ ಭ್ರಷ್ಟಾಚಾರಿ ಎಂದು ನೇರವಾಗಿ ಹೇಳಿದ ಪ್ರಾಮಾಣಿಕ ಕುಮಾರಸ್ವಾಮಿ ನೆನಪಿಗೆ ಬಂದ್ರು.

✵

**ಲೇಖಕರಲ್ಲಿ ವಿನಂತಿ**

ದಯವಿಟ್ಟು ನಿಮ್ಮ ಲೇಖನಗಳನ್ನು ನುಡಿ ಅಥವಾ ಬರಹ ತತ್ರಾಂಶ ಬಳಸಿ ಕಳುಹಿಸಿ. ಹಸ್ತಪ್ರತಿಯನ್ನು ಸ್ವೀಕರಿಸುವುದು ಕಷ್ಟವಾಗುತ್ತದೆ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರಕ್ಕಾಗಿ ಧನ್ಯವಾದಗಳು.

"ಸಿಕ್ಕ ಸಿಕ್ಕವರ ಮುಂದೆ ಬಕಾಸುರನ ಹಾಗೆ ತಿನ್ನ ಬೇಡ. ಹಾಳು ಕಣ್ಣುಬಿದ್ದು ಬಡವಾಗಿ ಹೋಗ್ತೀ" ಅಂತ ಅಮ್ಮ ಹೇಳುತ್ತಿದ್ದಳು.

"ಮೂವತ್ತು ವರ್ಷದಿಂದ ಯಾರದ್ದಾದರೂ ಕಣ್ಣುಬೀಳಲಿ ಎಂದು ಯಾರ್‍ಯಾರ ಮುಂದೋ ತಿನ್ನುತ್ತಲೇ ಇದ್ದೇನೆ ಒಂದಿಂಚೂ ಬಡವಾಗಿಲ್ಲ." ಎಂದು ಇನ್ನೂರು ಕೇಜಿ ತೂಗುವ ಮನುಷ್ಯ ಗೋಳಾಡುತ್ತಿದ್ದ.

# ಹುಟ್ಟಿಸಿದ ದೇವರು......

- ಗಣೇಶ ಹೆಗ್ಗಡೆ

**ಎಂ**ದಿನಂತೆ ನಮ್ಮ 'ಸಂಜೆ ಕಟ್ಟೆ' ಸಭೆ ಆರಂಭವಾದಾಗ, ವಾಡಿಕೆಯಂತೆ ಸಂಘದ ಗೌರವಾಧ್ಯಕ್ಷರಾದ ಪ್ರೊ॥ ತೋಲಾಂಡರಾಯರು ಎದ್ದು ನಿಂತು ಉರಿಯುತ್ತಿದ್ದ ಮಿಣುಕು ದೀಪದತ್ತ ದೃಷ್ಟಿನೆಟ್ಟು ''ಓಂ ನಮೋ ಜಗನ್ಮಾತೆಯೇ ನಮಃ'' ಎಂದರು.

''ಇದೇನ್ಸಾರ್, ಎಂದೂ ಇಲ್ಲದ್ದು ಅಪರೂಪವಾಗಿ ತಮ್ಮ ಬಾಯಿಯಲ್ಲಿ ಭಗವಂತನ ಜಪ'' ಎಂದು ಆಚ್ಚರಿಯಿಂದ ಡಾ॥ ಎಂಗತಂಬಿ ಪ್ರಶ್ನಿಸಿದರು.

''ಇವತ್ತು ನೀವ್ಯಾರು ಪೇಪರ್ ಓದಿಲ್ಲವೆ?''

''ಯಾಕ್ಸಾರ್, ಏನ್ ವಿಶೇಷ ಅಲ್ಲಿದೆ?'' ಎಂದು ನಾನು ತಬ್ಬಿಬ್ಬಾಗಿ ಕೇಳಿದೆ.

''ಅದೇ ಜನಗಣತಿಯ ವಿಚಾರ. ನಮ್ಮ ದೇಶದ ಜನಸಂಖ್ಯೆ 121 ಕೋಟಿ ದಾಟಿದೆ. ಕರ್ನಾಟಕದ ಜನಸಂಖ್ಯೆ ಆರು ಕೋಟಿ ಮೀರಿದೆ.''

''ಆಂಡವಾ!'' ಎಂದು ಕಿವಿ ಮುಚ್ಚಿಕೊಂಡರು ಡಾ॥ ಎಂಗತಂಬಿ. ಆಗಲೇ ಉರಿಯುತ್ತಿದ್ದ ವಿದ್ಯುತ್ ದೀಪ ಫಕ್ಕನೆ ಆರಿಹೋಯಿತು.

ಭಾರತದ ಜನಸಂಖ್ಯೆಯ ಸಮಸ್ಯೆಗೆ ಕೃಷ್ಣ ಪರಮಾತ್ಮ ತನ್ನ ವಿಶ್ವರೂಪ ದರ್ಶನವನ್ನು ತೋರಿಸಿದ!

''ಲೋಡ್ ಷೆಡ್ಡಿಂಗ್ ಇರ್ಬೇಕು'' ಅಂದೆ.

''ಅಯ್ಯೋ, ನನ್ನ ಗೋಡಂಬಿ ತಟ್ಟೆ ಕಾಣುತ್ತಿಲ್ಲ, ಬೇಗ ಮೋಂಬತ್ತಿ ಹಚ್ಚು'' ಎಂದು ಆಜ್ಞಾಪಿಸಿದರು. ಪ್ರೊ॥ ತೋಲಾಂಡರಾಯರು.

''ಸರ್, ಎರಡು ದಿನದ ಹಿಂದೆ ನಮ್ಮೂರಿನ ಪವರ್ ಸ್ಟೇಷನ್ ಉದ್ಘಾಟನೆ ಸಂದರ್ಭದಲ್ಲಿ ಶೋಭಕ್ಕ ಮಾಡಿದ್ದ ಭಾಷಣ ಈಗ ನೆನಪಾಗುತ್ತಿದೆ'' ಎಂದರು ಡಾ॥ ಎಂಗತಂಬಿ.

''ಅಕ್ಕಾವ್ರು ಏನೆಂದು ಹೇಳಿದರು?''

''ಈಗ ರಾಜ್ಯದಲ್ಲಿ ಒಂದೂವರೆ ಕೋಟಿ ವಿದ್ಯುತ್ ಗ್ರಾಹಕರಿದ್ದಾರೆ. ಈಗ ರಾಜ್ಯದ ಜನಸಂಖ್ಯೆ ಆರು ಕೋಟಿಗೂ ಮೀರಿದೆ. ಅಂದರೆ ವಿದ್ಯುತ್ ಗ್ರಾಹಕರ ಸಂಖ್ಯೆ ಮುಂದಿನ ದಿನಗಳಲ್ಲಿ ಎರಡುಕೋಟಿ ದಾಟುವುದರಲ್ಲಿ ಸಂಶಯವೇ ಇಲ್ಲ. ಜಪಾನ್ ದೇಶದ ಭೂಕಂಪದಂತೆ ಪದೇ ಪದೇ ಕಾಡುತ್ತಿರುವ ಈ ವಿದ್ಯುತ್ ಸಮಸ್ಯೆಯ ನಿವಾರಣೆಗೆ ಪ್ರತಿಯೊಬ್ಬ ಪ್ರಜೆಯ ಸಹಕಾರ ಸರಕಾರಕ್ಕೆ ಬೇಕು. ಇಷ್ಟು ದಿನ ನವೆಂಬರ್ ತಿಂಗಳಿನಲ್ಲಿ ಮಾತ್ರ ದೀಪಾವಳಿ ಹಬ್ಬ ಆಚರಿಸುತ್ತಿದ್ದೆವು. ಇನ್ನು ಮುಂದೆ ಪ್ರತಿದಿನವೂ ದೀಪಾವಳಿ ಆಚರಿಸುವಂತಾಗಬೇಕು. ಸರಕಾರದ ಸಹಾಯ ಹಸ್ತ ಪ್ರಜೆಗಳ ಪಾಲಿಗೆ .....'' ಎನ್ನುತ್ತಿದ್ದಂತೆ

ಡಾ|| ಎಂಗತಂಬಿಯವರ ವಿವರಣೆಯನ್ನು ಅರ್ಧದಲ್ಲೇ ತಡೆದು ''ಅರ್ಥವಾಯ್ತೇನ್ರಯ್ಯ ಶೋಭಕ್ಕನ ಮಾತಿನ ಗೂಢಾರ್ಥ?'' ಎಂದು ಹುಬ್ಬೇರಿಸಿದರು ಪ್ರೊ|| ತೋಲಾಂಡರಾಯರು.

''ಸರ್, ತಲೆಬುಡ ಅರ್ಥ ಆಗ್ಲಿಲ್ಲ. ನಿಮ್ಮ ದಮ್ಮಯ್ಯ, ಸಸ್ಪೆನ್ಸ್ ಕ್ರಿಯೇಟ್ ಮಾಡ್ಬೇಡಿ'' ಎಂದು ನಾವು ಅಲವತ್ತು ಕೊಂಡೆವು.

''ಕೇಳುವಂತಹವರಾಗಿ ಕರ್ನಾಟಕದಲ್ಲಿ ಪ್ರತಿ ಮನೆಯಲ್ಲೂ ಹೀಗೆ ಅನುದಿನ ಸುರು ಸುರು ಬತ್ತಿಯನ್ನು ಹಚ್ಚುವುದರಿಂದ ಮನೆಯೂ ಬೆಳಗಿದಂತಾಯ್ತು. ಶೋಭಕ್ಕನಿಗೂ ಈ ಪೀಕ್‌ಲೋಡ್ ಪೀಕಲಾಟದಿಂದ ತಪ್ಪಿಸಿಕೊಂಡಂತಾಯ್ತು.''

''ಸರ್, ಈ ಭಾರೀ ಪ್ರಮಾಣದಲ್ಲಿ ಸುರು ಸುರು ಬತ್ತಿಯನ್ನು ತಯಾರಿಸಿ ಸಪ್ಲೈ ಮಾಡುವುದು ಸಾಧ್ಯವೇ?''

''ಶೋಭಕ್ಕ ಜಾಣೆ. ಅವರದ್ದೇ ಪಾರ್ಟಿಯ ಪ್ರಮುಖ ಸದಸ್ಯರಾದ 'ಅನಂತಯ್ಯ'ನವರಿಗೆ ಈಗಾಗಲೇ ಪ್ರಪೋಸಲ್ ಹೋಗಿರುತ್ತೆ. ಅದರ ಸುರು ಸುರು ಬತ್ತಿ ಫ್ಯಾಕ್ಟರಿಗೆ ಎಂತಹ ಬೇಡಿಕೆ ಬಂದರೂ ತಡೆದುಕೊಳ್ಳುವ ಶಕ್ತಿಯಿದೆ. ಸಾಮರ್ಥ್ಯವಿದೆ.''

ಫಕ್ಕನೆ ಲೈಟ್ ಹತ್ತಿಕೊಂಡಿತು. ''ಸಭೆ ಬರಖಾಸ್ತು'' ಎಂದರು ಪ್ರೊ|| ತೋಲಾಂಡರಾಯರು.

★★★★

ಒಂದು ದಿನ ಡಾ|| ಎಂಗತಂಬಿ ಏದುಸಿರು ಬಿಡುತ್ತ ನನ್ನ ಬಳಿ ಓಡಿಬಂದರು.

''ಪ್ರೊ|| ತೋಲಾಂಡರಾಯರ ಆರೋಗ್ಯ ತೀರಾ ಹದಗೆಟ್ಟಿದೆಯಂತೆ. ಸದಾ ಮಂಕಾಗಿಯೆ ಕುಳಿತಿರುತ್ತಾರೆ. ನೋಡಲು ಯಾರೇ ಹೋಗಲಿ, ಅವರ ಮುಂದೆ ಜನಗಣತಿಯ ಅಂಕಿ ಅಂಶಗಳ ಜಾಡನ್ನು ಹಿಡಿದು, ದೇಶದ ಅದರಲ್ಲೂ ನಮ್ಮ ಕರ್ನಾಟಕ ರಾಜ್ಯದಲ್ಲಿ ಮುಂದೊದಗಬಹುದಾದ ಆಹಾರ ಸಮಸ್ಯೆ, ವಸತಿ ಸಮಸ್ಯೆ, ನೀರಿನ ಸಮಸ್ಯೆ ಹಾಗೂ ಶೈಕ್ಷಣಿಕ ಸಮಸ್ಯೆ.... ಇತ್ಯಾದಿ ವಿಚಾರಗಳ ಬಗ್ಗೆ ಚರ್ಚಿಸುತ್ತಾ ಹಾಗೆಯೆ ಜ್ಞಾನ ತಪ್ಪುತ್ತಿದ್ದಾರಂತೆ. ಇದು ಖಂಡಿತಾ ಸೀರಿಯಸ್ ಖಾಯಿಲೆ ಎಂದರು.

''ಹೋಗೋಣ ನಡೀರಿ'' ಎಂದು ಲಗುಬಗೆಯಿಂದ ಎದ್ದೆ.

★★★★

ನಾವಿಬ್ಬರೂ ಪ್ರೊ|| ತೋಲಾಂಡರಾಯರ ಕೋಣೆ ಹೊಕ್ಕಾಗ ಅವರು ಹಾಸಿಗೆಯ ಮೇಲೆ ನಿಸ್ತೇಜವಾಗಿ ಪವಡಿಸಿದ್ದರು. ಕಣ್ಣುಮುಚ್ಚಿದ್ದರೂ ರೆಪ್ಪೆಗಳು ಅಲ್ಲಾಡುತ್ತಿರುವುದನ್ನು ಗಮನಿಸಿದರೆ, ಅವರು ಯಾವುದೋ ಆತಂಕದಲ್ಲಿ ಸಿಲುಕಿದಂತೆ ಭಾಸವಾಗುತ್ತಿತ್ತು. ನೋಡುತ್ತಿದ್ದಂತೆಯೇ ಅವರ ಮುಖದ ನರನಾಡಿಗಳು ಬಿಗಿದು ಕೊಂಡವು. ''ಹುಲ್ಲಿ....ಹುಲ್ಲು....'' ಎಂದು ಕಿರುಚಿಕೊಂಡರು.

''ಸರ್...ಸರ್... ಎಚ್ಚರ ಮಾಡ್ಕೊಳ್ಳಿ...'' ಎಂದು ಭುಜ ಅಲುಗಾಡಿಸಿದಾಗ ಬೆಚ್ಚಿಬಿದ್ದು ಕಣ್ಣುಬಿಟ್ಟರು ಪ್ರೊ|| ತೋಲಾಂಡರಾಯರು.

‘‘ಯಾಕ್ಸಾರ್ ಏನಾಯ್ತು? ಎಂದು ಕೇಳಿದೆವು.

‘‘ಹಾಳಾದ್ದು ಕೆಟ್ಟ ಕನಸು ಕಣ್ರಯ್ಯ’’ ಎನ್ನುತ್ತಲೇ ಎದ್ದು ಕುಳಿತರು.

‘‘ಒಂದು ವಾರದಿಂದ ಈ ಜನಸಂಖ್ಯೆಯೋಚನೆ ಕಾಡುತ್ತಿತ್ತು. ಹಾಗೇ ನಿದ್ದೆಗೆ ಜಾರಿದಾಗ ಕನಸಿನಲ್ಲಿ ಕೃಷ್ಣ ಪರಮಾತ್ಮ ಕಂಡ. ಜಗದೋದ್ಧಾರಕನ ಮುಂದೆ ಈ ಜನಸಂಖ್ಯೆ ಸಮಸ್ಯೆಯ ಸುರುಳಿಯನ್ನು ಬಿಚ್ಚಿಟ್ಟಾಗ ಪರಮಾತ್ಮ ನಗುತ್ತಾ ಬಾಯಿತೆರೆದು ವಿಶ್ವ ದರ್ಶನ ಮಾಡಿಸಿದಂತಾಯ್ತು. ನೋಡಿದರೆ ಅದೊಂದು ದೊಡ್ಡ ಹುಲ್ಲುಗಾವಲು. ವಿಶ್ವದ ಪ್ರಜೆಗಳೆಲ್ಲಾ ಅಲ್ಲಿ ಹುಲ್ಲು ಮೇಯುತ್ತಿದ್ದಾರೆ. ನನಗೆ ತೀರಾ ಭಯವಾಗಿ ಹೋಯಿತು....’’

ಈ ವಿವರಣೆಯನ್ನು ಕೇಳಿಸಿಕೊಂಡ ಪ್ರೊ|| ತೋಲಾಂಡರಾಯರ ತಾಯಿ ವೆಂಕಮ್ಮ ಓಡಿಹೋಗಿ, ದೇವರ ಮುಂದೆ ತುಪ್ಪದ ದೀಪ ಹಚ್ಚಿಟ್ಟು ಬಂದು, ಮಗನ ತಲೆ ನೇವರಿಸುತ್ತಾ ಹೇಳಿದರು. ‘‘ನಾನು ಅವ್ರೊತ್ನಿಂದ್ಲೂ ಬಡ್ಕೋತಿದ್ದೆ ಪ್ರಜಾನುರಾಗಿ ಮುಖ್ಯಮಂತ್ರಿಗಳನ್ನು ಗೇಲಿ ಮಾಡಬ್ಯಾಡ. ರಾಜ್ಯದ ಬೊಕ್ಕಸದ ಹಣವನ್ನೆಲ್ಲಾ ದೇವರು ದೇವಸ್ಥಾನಗಳಿಗೆ ಹಂಚುತ್ತಿದ್ದಾರೆ ಎಂದು ಹಲುಬ ಬ್ಯಾಡ. ಯಾವತ್ತೂ ಆ ಭಗವಂತ ನಮ್ಮ ಕೈ ಬಿಡಲ್ಲ. ನಮ್ಮ ಹಿರಿಯರು ಸುಮ್ಮನೆ ಗಾದೆ ಮಾಡಿದ್ದಾರೆಯೆ ‘‘ಹುಟ್ಟಿಸಿದ ದೇವರು.... ಹುಲ್ಲು.....’’ ಅಂತ.

★★★★

ನಮ್ಮೊಡನೆ ಕಾಫಿ ಕುಡಿಯುತ್ತಾ ಕುಳಿತ ಪ್ರೊ|| ತೋಲಾಂಡರಾಯರು ‘‘World Cup ಏನಾಯ್ತಯ್ಯ?’’ ಎಂದರು.

‘‘ಭಾರತ ಗೆದ್ದಿತು ಸರ್. ತಾವು ಮ್ಯಾಚ್ ಮಿಸ್ ಮಾಡ್ಕೊಂಡ್ರಿ’’ ಎಂದೆ.

‘‘ಎಲ್ಲಿ ಗೆದ್ದಿತಯ್ಯಾ? ಚೀನಾ ದೇಶದವರನ್ನು ಇನ್ನೂ ಸೋಲಿಸಲಿಕ್ಕೆ ನಮ್‌ಕೈಲಿ ಆಗಲಿಲ್ಲವಲ್ಲ’’ ಎಂಬ ಅವರ ವಿವರಣೆ ಕೇಳಿ ಅವರಿನ್ನೂ ಜನಸಂಖ್ಯೆಯ ಗುಂಗಿನಿಂದ ಹೊರಬಂದಿಲ್ಲವೆಂಬ ಖಾತ್ರಿಯೊಡನೆ ಅಲ್ಲಿಂದ ಜಾರಿಕೊಂಡೆವು.

★★★★

ದಾರಿಯಲ್ಲಿ ‘‘ಸರ್, ಇದು ಐ.ಸಿ.ಯು. ಕೇಸ್?’’ ಎಂದು ಡಾ|| ಎಂಗತಂಬಿಯವರನ್ನು ಕೇಳಿದೆ.

‘‘ಇಲ್ಲ... ಇದು ಇಂಟೆನ್ಸೀವ್ Scare ಯೂನಿಟ್ ಕೇಸು’’ ಎಂದರು.

✵

ಮದುವೆಯಾದ ಹೊಸದರಲ್ಲಿ
ಕೇಳುತ್ತಿದ್ದ
ಏನು ಬೇಕು, ಏನು ಬೇಕು,
ಈಗ ಒಂದೇ ರಾಗ
ನೀನು ಸುಮ್ಮನಿರ ಬೇಕು

– ಸುಕೇಶವ

# 50-50 ಕ್ವಿಜ್

**- ಆನಂದ**

**ಈ ಪ್ರಶ್ನೆಗಳಿಗೆ ಉತ್ತರಿಸಲು ನೀವು ಪ್ರಯತ್ನಿಸಿದರೆ 50-50 ಗುಂಗಿನಿಂದ ನೀವು ಹೊರ ಬಂದಿಲ್ಲ ಎಂದು ಸಾಬೀತಾಗುತ್ತದೆ.**

1. 2015ರಲ್ಲಿ ವಿಶ್ವ ಕಪ್ ಗೆದ್ದರೆ ಧೋನಿ ಯಾವ ದೇವರಿಗೆ ಮುಡಿ ಕೊಡುತ್ತಾರೆ?
2. ಹಾಗೆ ಮುಡಿ ಕೊಡುವಾಗ ಸಮಯ ಎಷ್ಟಾಗಿರುತ್ತದೆ?
3. 2015ರಲ್ಲಿ ವಿಶ್ವ ಕಪ್ ಗೆದ್ದರೆ ಧೋನಿ ಯಾವ ಸ್ಮಾರಕದ ಮುಂದೆ ನಿಂತು ಫೋಟೋ ತೆಗೆಸಿಕೊಳ್ಳುತ್ತಾರೆ?
4. 2011 ವಿಶ್ವ ಕಪ್ ಫೈನಲ್ಸ್ ಪಂದ್ಯದ ತುಣುಕುಗಳನ್ನು ಭಾರತದ ಟೀವಿ ಚಾನಲ್‌ಗಳು ಎಷ್ಟು ಬಾರಿ ಪ್ರಸಾರ ಮಾಡಲಿವೆ?
5. 2011ರಲ್ಲಿ ಇಂಗ್ಲೆಂಡ್ ತಂಡವನ್ನು ಸೋಲಿಸಿದ್ದರಿಂದ ಐರ್ಲೆಂಡ್ ತಂಡವನ್ನು 2015ರ ಪಂದ್ಯಾವಳಿಯಿಂದ ಹೊರಗಿಡಲಾಗಿದೆಯೆ?
6. 2015ರಲ್ಲಿ ಪಾಕಿಸ್ತಾನ ಭಾರತವನ್ನು ಸೋಲಿಸಿದರೆ ಆ ತಂಡದ ಆಟಗಾರರಿಗೆ ತಲಾ ಎಷ್ಟು ಎಕರೆ ಫಲವತ್ತಾದ ಜಮೀನನ್ನು ಉಡುಗೊರೆಯಾಗಿ ನೀಡಲಾಗುವುದು?
7. 2015ರಲ್ಲಿ ವಿಶ್ವ ಕಪ್ ಗೆಲ್ಲುವ ಸಮಯಕ್ಕೆ ಭಾರತದ ತಂಡಕ್ಕೆ ಬೆಂಗಳೂರಿನಲ್ಲಿ ನಿವೇಶನ ನೀಡಲು ಬಿಡಿಎ ಕಾಯಿದೆಗೆ ತಿದ್ದುಪಡಿ ತರಲಾಗಿರುವುದೆ?
8. ಅಂದಹಾಗೆ ಧೋನಿ ತಂಡಕ್ಕೆ ನಿವೇಶನಗಳನ್ನು ಹಂಚಲು ಯೆಡ್ಯೂರಪ್ಪನವರು ತಮ್ಮ ಕುಟುಂಬದ ಸುಪರ್ದಿನಲ್ಲಿರುವ (ಡಿ) ನೋಟಿಫೈಡ್ ಜಮೀನನ್ನೇ ಬಳಸಿ ತಮ್ಮ ಮಾತು ಉಳಿಸಿಕೊಳ್ಳಬಹುದಿತ್ತಲ್ಲವೆ?
9. 2015ರ ಫೈನಲ್ಲಿನಲ್ಲೇ ತೆಂಡೂಲ್ಕರ್ ತಮ್ಮ ಸೆಂಚುರಿ ಆಫ್ ಸೆಂಚುರಿ ಬಾರಿಸಬಹುದೆ?
10. 2015ರ ಹೊತ್ತಿಗೆ ಧೋನಿ ಪಡೆಯುವರು ಕಿರು ತೆರೆಯ ಮೇಲೆ ಎಂಡಾರ್ಸ್ ಮಾಡದೇ ಇರುವಂತಹ ಯಾವುದಾದರೂ ಗ್ರಾಹಕ ವಸ್ತು ಉಳಿದಿರಬಹುದೆ?
11. ಒಂದೇ ಒಂದು ಪಂದ್ಯದಲ್ಲಿ ಆಡಿದರೂ ಎಲ್ಲ ಪಂದ್ಯಗಳಲ್ಲಿ ಆಡಿದವರಷ್ಟೇ ಬಹುಮಾನ ಪಡೆಯುವಂತಹ ಆಟಗಾರ 2015ರ ಭಾರತದ ತಂಡದಲ್ಲಿ ಇರಲು ಸಾಧ್ಯವೆ?
12. ರಿ-ಪ್ಲೆ ತರಹ ರಿ-ಟಾಸ್ ಸಹ 2015ರಲ್ಲಿ ಮರುಕಳಿಸಬಹುದೆ?
13. 2015ರಲ್ಲೂ ಪಾಕ್ ತಂಡದ ನಾಯಕ ಭಾರತೀಯರು ವಿಶಾಲ ಹೃದಯಿಗಳಲ್ಲ ಎಂಬ ಹೇಳಿಕೆ ನೀಡಿ ನಂತರ ನನ್ನ ಹೇಳಿಕೆಯನ್ನು ತಿರುಚಲಾಗಿದೆ ಎಂಬ ಸ್ಪಷ್ಟೀಕರಣ ನೀಡುವ ಸಾಧ್ಯತೆ ಇದೆಯೆ?
14. 2011ರಲ್ಲಿ ಭಾರತದ ಆಟಗಾರರಿಗೆ ಸಿಕ್ಕ ಬಹುಮಾನವನ್ನು ಎಫ್‌ಡಿಯಲ್ಲಿ ತೊಡಗಿಸಿದರೆ 2015ರ ವೇಳೆಗೆ ಅದು ಎಷ್ಟಾಗಬಹುದು?
15. 2015ರಲ್ಲಿ ನಡೆಯುವ ಡೇ ಅಂಡ್ ನೈಟ್ ಪಂದ್ಯಗಳು ಭಾರತದಲ್ಲಿ ನೋಡುವಾಗ ಡೇ ಆಗಿರುವುದೋ ಅಥವಾ ನೈಟ್ ಆಗಿರುವುದೋ?
16. 2015ರಲ್ಲಿ ಸ್ಟ್ರಿಪ್ ಟೀಸ್ ಮಾಡಲು ಯಾವುದಾದರೂ ಮಾಡೆಲ್ ಈಗಲೇ ತಯಾರಿ ಶುರು ಮಾಡಿರಬಹುದೆ?

**(ಅಭಿನಂದನೆಗಳು, ನಿಮ್ಮ ಉತ್ತರಗಳೇ ಸರಿಯಾದ ಉತ್ತರಗಳು!)**




## ನಗಬಾರದೇ ಅರೆಗಳಿಗೆ

(ಸಾ.ಕೃ. ಪ್ರಕಾಶ್ ಅವರ ಆಯ್ದ ನಗೆಬರಹಗಳು)

**ವೈ.ಎನ್. ಗುಂಡೂರಾವ್**

ವಿಕ್ರಂ ಪ್ರಕಾಶನ, ಬೆಂಗಳೂರು

ಫೋನ್ : 40908549 – 99803 97828

ಹಾಸ್ಯ, ವಿಡಂಬನೆ, ಪ್ರಬಂಧ ಮುಂತಾದ ಪ್ರಕಾರಗಳಲ್ಲಿ ಅಪಾರ ಹೆಸರು ಮಾಡಿದ್ದ ಸಾ.ಕೃ. ಪ್ರಕಾಶ್ ಅವರ ಅನೇಕ ಹಾಸ್ಯ ಸಂಗ್ರಹಗಳೂ, ಕಾದಂಬರಿಗಳೂ ಪ್ರಕಟವಾಗಿವೆ. ಪ್ರಸ್ತುತ ಸಂಕಲನದಲ್ಲಿ ವೈ.ಎನ್. ಗುಂಡೂರಾವ್ ಅವರು ಸಾ.ಕೃ. ಪ್ರಕಾಶ್ ಅವರ ಹಾಸ್ಯ ಲೇಖನಗಳಿಂದ ಮುದ ಕೊಡುವ ಅನೇಕ ಲೇಖನಗಳನ್ನು ಆಯ್ದು ನಗಬಾರದೇ ಅರೆಗಳಿಗೆ ಸಂಗ್ರಹವನ್ನು ತಂದಿದ್ದಾರೆ. ಈ ಲೇಖನಗಳನ್ನು ಓದಿದಾಗ ನಗೆ ಬಾರದೇ ಇರದು. ಎಲ್ಲ ಲೇಖನಗಳೂ ವಿಡಂಬನಾತ್ಮಕವಾಗಿವೆ ಎನ್ನಬಹುದಾದರೂ ಪುಣ್ಯವಂತರು, ರಾಮಬಾಣ, ನಾಟಕದವ್ರು, ಬೇಸ್ತು ಮುಂತಾದುವು ವಿಶೇಷ ಗಮನ ಸೆಳೆಯುತ್ತವೆ. ಈ ಸಂಗ್ರಹದ ಮುಖಾಂತರ ಸಾ.ಕೃ. ಪ್ರಕಾಶ್ ಅವರ ಎಲ್ಲ ಕೃತಿಗಳನ್ನೂ ಓದುವ ಕುತೂಹಲ ಓದುಗರಲ್ಲಿ ಖಂಡಿತಾ ಮೂಡುವುದು.

★★★★★★★★★★★★★★★★★★★★★★★★★★★★★★★★★★★★★

## ನನ್ನ ಪ್ರೀತಿಯ ಅಪ್ಪ

**ವೈ.ಎನ್. ಗುಂಡೂರಾವ್**

ಸಾಹಿತ್ಯ ಚಂದನ, ಬೆಂಗಳೂರು, ಫೋನ : 2660 7214




ಈಗಾಗಲೇ ತಮ್ಮ ಹಾಸ್ಯ ಲೇಖನಗಳು, ವಿಡಂಬನೆಗಳು ಮುಂತಾದುವುಗಳಿಂದ ಅಪಾರ ಹೆಸರು ಮಾಡಿರುವ ವೈ.ಎನ್. ಗುಂಡೂರಾವ್ ಅವರ ಇತ್ತೀಚಿನ ಪ್ರಬಂಧ ಸಂಕಲನ ನನ್ನ ಪ್ರೀತಿಯ ಅಪ್ಪ. ಇಲ್ಲಿನ ಸಂಗ್ರಹಗಳಲ್ಲಿ ಬರೀ ಅಪ್ಪನ ಬಗ್ಗೆ ಪ್ರಬಂಧಗಳಿಲ್ಲ, ಜೊತೆಜೊತೆಗೆ ಲೇಖಕರ ಬದುಕಿನ ಮೂಸೆಯಿಂದಾಯ್ದ ಅನೇಕ ನೆನಪುಗಳ ಕಟ್ಟುಗಳಿವೆ. ಬರವಣಿಗೆ ಲೀಲಾಜಾಲವಾಗಿರುವುದರಿಂದ ಓದುಗರಿಗೆ ಲೇಖಕರ ಅನುಭವದ ಸಾರ ನೇರವಾಗಿ ಆಗಿ ಎಲ್ಲ ಲೇಖನಗಳೂ ಸಲೀಸಾಗಿ ಓದಿಸಿಕೊಂಡು ಹೋಗುತ್ತವೆ. ಓದಿದ ನಂತರ ಮನದ ಮೂಲೆಯಲ್ಲಿ ಒಂದು ರೀತಿಯ ಆಪ್ತತೆ ಮೂಡುತ್ತದೆ. ಸಂಗ್ರಹ ಯೋಗ್ಯ ಕೃತಿ ಇದಾಗಿದ್ದು ಲೇಖಕರ ಲೇಖನದ ಜಾಣ್ಮೆ ಪ್ರತಿಯೊಂದು ಲೇಖನದಲ್ಲೂ ಎದ್ದು ಕಾಣುತ್ತದೆ.

# ಹೊಸ ಸೂತ್ರಗಳು

**- ಸೂತ್ರಧಾರಿ**

- ಕಾರ್ ರಿಪೇರಿ ಮಾಡುತ್ತಿರುವಾಗ ಕೈಗೆ ಗ್ರೀಸ್ ಹಚ್ಚಿಕೊಂಡ ಮೇಲೆ ನಿಮ್ಮ ಮೂಗಿನ ಮೇಲೆ ತುರಿಕೆ ಆರಂಭವಾಗುತ್ತದೆ.
- ಯಾವುದೇ ಮೊಳೆ, ನಟ್, ಬೋಲ್ಟ್, ಸ್ಕ್ರೂ, ಸೂಜಿ ಮುಂತಾದವು ಕೈ ಜಾರಿ ಕೆಳಗೆ ಬಿದ್ದಾಗ ಅವು ನಿಮಗೆ ಕಾಣದಾದ ಜಾಗಕ್ಕೆ ಹೋಗಿ ಬೀಳುತ್ತವೆ.
- ನೀವು ಮಾಡುತ್ತಿರುವ ಕೆಲಸವನ್ನು ಗಮನಿಸುತ್ತಿರುವವರ ಸಂಖ್ಯೆ ಅದು ಎಷ್ಟು ಮೂರ್ಖತನವಾಗಿದೆ ಎಂಬುದನ್ನು ಅವಲಂಬಿಸಿರುತ್ತದೆ.
- ನೀವು ರಾಂಗ್ ನಂಬರ್‌ಗೆ ಡಯಲ್ ಮಾಡಿದಾಗ ಅದು ಬ್ಯುಸಿ ಆಗಿರುವುದೇ ಇಲ್ಲ; ಯಾರಾದರೂ ಖಂಡಿತ ಉತ್ತರಿಸುತ್ತಾರೆ.
- ಇಂದು ಆಫೀಸಿಗೆ ತಡವಾಗಿ ಬಂದಿದ್ದಕ್ಕೆ ಕಾರು ಪಂಕ್ಚರ್ ಎಂಬ ಹುಸಿ ಕಾರಣ ನಿಮ್ಮ ಬಾಸ್‌ಗೆ ಕೊಟ್ಟರೆ ಮರುದಿನ ನಿಮ್ಮ ಕಾರ್ ಪಂಕ್ಚರ್ ಆಗುವುದು ಖಂಡಿತ.
- ನೀವು ಸ್ನಾನಕ್ಕೆ ಇಳಿದು ಮೈಗೆಲ್ಲ ನೀರು ಸುರಿದುಕೊಂಡಿದ್ದಾಗ ಫೋನ್ ಸದ್ದಾಗುತ್ತದೆ.
- ನೀವು ಯಾರ ಜತೆ ಕಾಣಿಸಿಕೊಳ್ಳಬಾರದು ಎಂದು ಬಯಸಿರುತ್ತೀರೋ ಅವರ ಜತೆ ಇದ್ದಾಗಲೇ ನೀವು ಭೇಟಿ ಮಾಡಬೇಕೆಂದಿರುವ ವ್ಯಕ್ತಿ ಸಿಗುತ್ತಾರೆ.
- ಈ ಯಂತ್ರ ಕೆಟ್ಟಿದೆ ಎಂದು ಸಾಬೀತು ಮಾಡಲು ನೀವು ಹೊರಟಾಗಲೇ ಅದು ಚಾಲೂ ಆಗುತ್ತದೆ.
- ನಿಮ್ಮ ಬೆರಳು ತಲುಪಲಾಗದ ಜಾಗದಲ್ಲೇ ನವೆ ಹೆಚ್ಚಾಗಿರುತ್ತದೆ.
- ಒಂದು ಕಪ್ ಬಿಸಿ ಕಾಫಿ ಕುಡಿಯಲು ನೀವು ಸಜ್ಜಾದಾಗ ನಿಮ್ಮ ಬಾಸ್ ನಿಮಗೊಂದು ಕೆಲಸ ಹೇಳುತ್ತಾರೆ. ಆ ಕೆಲಸ ಮುಗಿಯುವ ವೇಳೆಗೆ ಕಾಫಿ ತಣ್ಣಗಾಗಿರುತ್ತದೆ.
- ಜಾಮ್ ಹಚ್ಚಿದ ಬ್ರೆಡ್ ಸ್ಲೈಸ್ ಕೆಳಗೆ ಬೀಳುವಾಗ ಅದು ಹೊಸದಾಗಿ ಕೊಂಡಿದ್ದ ರತ್ನಗಂಬಳಿಯ ಮೇಲೆ ಬೀಳುವ ಸಂಭವವೇ ಹೆಚ್ಚು.
- ನೀವು ಏನು ಹೇಳುತ್ತಿದ್ದೀರಿ ಎಂದು ನಿಮಗೆ ಗೊತ್ತಿಲ್ಲದ ಮೇಲೆ ಏನು ಬೇಕಾದರೂ ಆಗಬಹುದು.
- ಬಾಯಿ ಮುಚ್ಚಿಯೇ ಇದ್ದರೆ ಚಪ್ಪಾಳೆ ಬೀಳದು.
- ನಿಮಗೆ ಬೇಕಾಗಿದ್ದ ಸಾಮಾನು ಕೊಳ್ಳಲು ಹೊರಟಾಗ ಅದರ ಉತ್ಪಾದನೆ ನಿಲ್ಲಿಸಲಾಗಿರುತ್ತದೆ.

✵






**ಕಿವಿ - ಕೇಳುವ ಅಂಗವೇ ಆದರೂ ಅದರ ಒಂದು ಭಾಗ ನಮ್ಮ ದೇಹದ ಸಮತೋಲನ ಮಾಡುವ ಕೆಲಸ ನಿಭಾಯಿಸುತ್ತದೆ. ಕೇಳಿಸುವ ಭಾಗಕ್ಕೆ ತೊಂದರೆಯಾದರೆ ಕಿವುಡುತನ ಬರುತ್ತದೆ, ಹಾಗೆಯೇ ಉಳಿದ ಭಾಗಕ್ಕೆ ತೊಂದರೆಯಾದರೆ ತಲೆಸುತ್ತು ಕಿವಿಮೊರೆತ ಉಂಟಾಗುತ್ತದೆ. ಕಿವಿಮೊರೆತಕ್ಕೆ ಉಳಿದಂತೆ ಹಲವಾರು ಕಾರಣಗಳು ಇದ್ದರೂ ಈ ಸೂಕ್ಷ್ಮವಾದ ಅಂಗದ ತೊಂದರೆಯೇ ಬಹುಮಟ್ಟಿನ ಕಾರಣ. ಬಹಳ ಸಲ ಈ ತೊಂದರೆ ಔಷಧಿಗೆ ಒಗ್ಗದು. ಮೊರೆತ ಮುಚ್ಚುವಂತೆ ಶಬ್ದವನ್ನು ಹಿಯರಿಂಗ್ ಏಡ್ ಮೂಲಕ ಕೊಡಬೇಕಾಗುತ್ತದೆ. ಸದ್ಯಕ್ಕೆ ಅದೇ ಉತ್ತರ. ಕಿವಿಯ ಸೂಕ್ಷ್ಮತೆ ಕಡಿಮೆಯಾದ ನಂತರ ಹಿಯರಿಂಗ್ ಏಡ್ ಧರಿಸಿ ಎಲ್ಲರಂತೆಯೇ ಮಾತಿನ ಚಟುವಟಿಕೆಯಲ್ಲಿ ಭಾಗವಹಿಸಬೇಕು, ಅದು ಸಾಮಾನ್ಯ ಜೀವನ.**

**ಡಾ|| ಜಿ. ಪುರುಷೋತ್ತಮ ಇಡಿ.ಡಿ.**
**ವಾಕ್ - ಶ್ರವಣದೋಷ ತಜ್ಞ, ವಿಸ್ಪರ್ ವಾಕ್ - ಶ್ರವಣ ಕೇಂದ್ರ**

# ಹೀಗೊಂದು ವಸಂತೋತ್ಸವ

- ವಾಣೀ ಸುರೇಶ್



"ಬನ್ನಿ ಋತುಗಳ ರಾಜ ವಸಂತನನ್ನು ಐಸ್‌ಕ್ರೀಮಿನ ಮಾಧುರ್ಯದಿಂದ ಸ್ವಾಗತಿಸೋಣ. ನಿಮ್ಮ ಕುರ್ಚಿ ಹಾಗೂ ನಿಮ್ಮ ಆಯ್ಕೆಯ ಸಾಫ್ಟ್ ಡ್ರಿಂಕ್ ಅನ್ನು ತರುವುದನ್ನು ಮಾತ್ರ ಮರೆಯಬೇಡಿ. ನಿಮ್ಮ ಆಗಮನವನ್ನು ಸಂಭ್ರಮದಿಂದ ಎದುರು ನೋಡುತ್ತಿರುವ - ರಾಬರ್ಟ್ಸನ್ ಕುಟುಂಬ".

ಸ್ಥಳ: ನಮ್ಮ ಮನೆ.

- ಇದು ಯಾವ ಸೀಮೆ ಆಹ್ವಾನ ಪತ್ರಿಕೆ ಅಂದ್ರಾ?

ಹೌದು, ನಂಗೂ ಹಾಗೇ ಅನ್ನಿಸಿತು. ಅದ್ರಲ್ಲೂ ಅದರ ಎರಡನೇ ಸಾಲನ್ನು ಓದಿದಾಗ! ಸರಿ, ನನ್ನ ಕುತೂಹಲ ಕೆರಳುಕ್ಕೆ ಇಷ್ಟು ಸಾಕಲ್ಲ.

"ಅಲ್ವೋ, ಮನೆಗೆ ಕರೆಯುವವರನ್ನ - ನಿಮ್ಮ ಕುರ್ಚೀನ್ನ, ನಿಮ್ಮ drinkನ್ನ ನೀವೇ ತನ್ನಿ - ಅನ್ನೋದು ಎಂಥಾ ಸಭ್ಯತೇನೋ"?

- ಶುರುವಾಯಿತು ಅಮ್ಮನ ಪ್ರಶ್ನಾವಳಿ ಅಂತಂದ್ಕೊಂಡನೇನೋ ...,

"ಅಮ್ಮಾ, ಇದು ಗಾರ್ಡನ್ ಪಾರ್ಟಿ. ಅದಕ್ಕೇ ಕುರ್ಚಿ ತರಕ್ಕೆ ಕೇಳಿಕೊಂಡಿದ್ದಾರೆ. ಎಲ್ಲಾ ನೀನೇ ನೋಡೋವಂತೆ, ಆಚೆ ನಾಡಿದ್ದು ಮಧ್ಯಾಹ್ನ ರೆಡಿಯಾಗಿರು, ಲೇಟ್ ಮಾಡಬೇಡ" - ಅಂತಂದ ಸುಪುತ್ರ.

ಅಂದಹಾಗೇ, ಇಲ್ಲೇ ಎದುರುಗಡೆ ಸಾಲಿನಲ್ಲಿ ನಾಲ್ಕನೇ ಮನೆ ರಾಬರ್ಟ್ಸನ್ ಅವರದ್ದು.

ಅಂದು ಮಧ್ಯಾಹ್ನ ಅವತ್ತಿನ ಪಾರ್ಟಿಗೆ ಯಾವ ಸೀರೆ ಉಟ್ಟುಕೊಳ್ಳಲಿ ಅಂತ ಯೋಚಿಸ್ತಾ ನಿಂತವಳಿಗೆ - "ನೋಡಿದೆಯಾ ಇಲ್ಲಿ!" - ಅಂತ ಕಿಟಕಿಯ ಹತ್ತಿರದಿಂದ ಪತಿದೇವರ ಆಗ್ರಹಪೂರ್ವಕ ಕರೆ ಕೇಳಿಸ್ತು. ಯಾವಾಗಲೂ ಭಣಗುಟ್ಟುವ ಇಲ್ಲೀ ರಸ್ತೆಲೇನಿರುತ್ತೆ ಸದ್ಯ ಅಷ್ಟೊಂದು ಇಂಟರೆಸ್ಟಿಂಗ್ ಆಗಿರೋದು? ಕಾಲು ಘಂಟೆ ಚೌಕಾಸಿ ಮಾಡಿ ಒಂದು ಸೌತೆಕಾಯನ್ನೋ, ದಂಟಿನಸೊಪ್ಪನ್ನೋ ಕೊತ್ತಂಬರೀನ್ನೋ ಮನೆ ಮುಂದೇನೇ ಕೊಂಡ್ಕೊಳ್ಳೊವಂಥಾ ಸಿಂಪಲ್ ಲಕ್ಸುರಿ ಮೊದಲೇ ಇಲ್ಲ. ಹೋಗಲೀಂದ್ರೆ ಮನಸೋ ಇಚ್ಛೆ ಹರಟೆ ಹೊಡೆಯುಕ್ಕೆ ಪುರುಸೊತ್ತಿರುವ ಅಕ್ಕಪಕ್ಕದವರಂತೂ ಇಲ್ವೇ ಇಲ್ಲವಲ್ಲ - ಅಂತ

ಅಂದ್ಕೊಂಡು ಒಲ್ಲದ ಮನಸ್ಸಲ್ಲೇ ಅದೇನಿರಬಹುದೂಂತ ನೋಡಕ್ಕೆ ಹೋದೆ.

ಅಲ್ಲಿ ನೋಡಿದ್ರೆ ಮನೆ ಮುಂದಿನ ರಸ್ತೇಲಿ, ಎಂದೂ ಇಲ್ಲದಷ್ಟು ಜನರು ಚಿಕ್ಕಚಿಕ್ಕ ಗುಂಪುಗಳಲ್ಲಿ ಗುಳೆ ಕಿತ್ಕೊಂಡು ಮೆರವಣಿಗೆ ಹೊರಟಂತಿತ್ತು! ಗುಳೆ ಕಿತ್ಕೊಂಡು ಅಂತ್ಯಾಕಂದೇಂದ್ರೆ ಎಲ್ಲರ ಕೈಯಲ್ಲೂ ಒಂದಲ್ಲ ಒಂದು ಸಾಮಾನು! ತರಹೇವಾರಿ ಬಣ್ಣದ ರೆಕ್ಸಿನ್ ಕವರಿಂದಾಚೆಗೆ ಇಣುಕುತ್ತಿದ್ದ ಪೀಠೋಪಕರಣಗಳ ಕಾಲುಗಳು, ಚಿತ್ರವಿಚಿತ್ರ ಆಕಾರದ ಪ್ಲಾಸ್ಟಿಕ್ canಗಳು ಇತ್ಯಾದಿ.

''ಸ್ಪ್ರಿಂಗ್ ಕ್ಲೀನಿಂಗಿನ ಸಾಮಾನು ಆಚೆ ಇಡುಕ್ಕೆ (ಎಸೆಯಕ್ಕೆ) ಹೋಗ್ತಿದ್ದಾರೆ ಅನ್ನಕ್ಕೆ ಇವತ್ತು ಗಾರ್ಬೇಜ್ ಟ್ರಕ್ ಬರುವ ದಿನವೂ ಅಲ್ಲ ನೋಡು!'' – ಇವರ ಅಚ್ಚರಿಯ ಕಾರಣ ತಿಳಿಯಿತು.

''ಎಲ್ಲರೂ ರಾಬ್ ಮನೆ ಗಾರ್ಡನ್ ಪಾರ್ಟೀಗೆ ಹೊರಟಿರೋರಿರಬೇಕ್ರೀ. ಅದಕ್ಕೇ ಕೈಯಲ್ಲಿ ಕುರ್ಚಿಗಳೂ, ಜ್ಯೂಸುಗಳು ಅವೆಲ್ಲಾ ಅಷ್ಟೇ. ಹೌದಲ್ವೇನೋ?'' ಇನ್ವಿಟೇಶನ್ ಓದಿದ್ದೆನಲ್ಲ! ಪ್ರಶ್ನೇನ ಮಗನಿಗೆ ಪಾಸ್ ಮಾಡಿದೆ.

ಅವನು, ''ಮತ್ತಿನ್ನೇನಮ್ಮಾ. ಫೋನ್ ಮಾಡಿದ ತಕ್ಷಣ ನಾವು ಕೇಳಿದಷ್ಟು (ಕೆಲವೊಮ್ಮೆ ಹರಕು ಮುರುಕು!) ಕುರ್ಚಿಗಳನ್ನು ಟೆಂಪೋನಲ್ಲಿ ಹಾಕ್ಕೊಂಡು ತಂದು ಆರೇಂಜ್ ಮಾಡಿಕೊಡಕ್ಕೆ ಇದೇನು ಮಲ್ಲೇಶ್ವರ ಅನ್ಕೊಂಡ್ರಾ! ಇಲ್ಲದೇದ್ರೂ, ಅಲ್ಲೀ ಹಾಗೆ ಐದು ಆರು ಜನ ಶಾಮಿಯಾನದ ಅಂಗಡಿಯವರು ಬಂದು ಎಲ್ಲಾನ್ನೂ ನಮಗೆ ಬೇಕಾದ ಹಾಗೆ ರೆಡಿ ಮಾಡಿಕೊಡಬೇಕಾದ್ರೆ ಇಲ್ಲಿವರಿಗೆ ಎಷ್ಟು ಸುರೀಬೇಕು ಗೊತ್ತಾ? ಸರ್ರ್‌ರೀ, ಈಗ ಹೊತ್ತಾಗುತ್ತೆ ಆಮೇಲೆ ಮಾತಾಡೋಣ, ನಾವೂ ಇನ್ನು ಹೊರಡೋಣ ಅಲ್ವಾ?'' – ಅಂತಂದ.

ಎರಡೆರಡು ಕುರ್ಚಿಗಳು ಹಿಡ್ಕೊಂಡಿದ್ದ ಅಪ್ಪ-ಮಗ, ಒಂದು ದೊಡ್ಡ ಮೌಂಟನ್ ಮಿಸ್ಟಿನ ಕ್ಯಾನು ಮತ್ತು ಹೂಗೊಂಚಲಿನ ಸಮೇತದ ಸೊಸೆ, ಬಲಗೈಯಲ್ಲಿ ನನ್ನ ತೋರು ಬೆರಳು, ಎಡತೋಳಿನಲ್ಲಿ ಅವುಚಿ ಹಿಡಿದಿದ್ದ ಟೆಡ್ಡಿಬೇರಿನ ಜೊತೆಯ ಮೊಮ್ಮಗು – ಹೀಗೆ ನಾವುಗಳೂ ಕೂಡಾ ಮುಂದಿನ ಎಂಟ್ಹತ್ತು ನಿಮಿಷದಲ್ಲಿ ರಸ್ತೆ ಮೇಲಿದ್ವಿ.

''ಹೇ, ಬನ್ನಿ ಬನ್ನಿ'' ಅಂತ ನಗ್‌ನಗ್ತಾ, ಒಳಗೆ ಕರೆದರು – ರಾಬ್, ಅವರ ಕೈಯ್ಯಲ್ಲಿನ ಲೀಶ್ನಲ್ಲಿ ಅವರ ಆಳೆತ್ತರದ ನಾಯಿ ಬ್ಲ್ಯಾಕಿ, ಅದರ ಪಕ್ಕದಲ್ಲಿ ನಿಂತಿದ್ದ ಹಿತಮಿತವಾಗಿ ಅಲಂಕರಿಸಿಕೊಂಡಿದ್ದ ಮಿಸೆಸ್ ರಾಬ್. ಅಂದಹಾಗೇ, ಹಲ್ಲೋ ಅಥವಾ ಹಾಯ್ ಅನ್ನಕ್ಕೆ ಬದಲು 'ಹೇ' – ಅನ್ನೋದು ಈಗ ಇಲ್ಲಿಯ ಲೇಟೆಸ್ಟು.

ಒಳಗೆ, ಅಂದ್ರೆ ಅವರ ಮನೆಯ ಹಿಂದೆ ಸುಮಾರು ಒಂದರ್ಧ ಎಕರೆಯಷ್ಟಿದ್ದ ವಿಶಾಲ ಹುಲ್ಲುಹಾಸಿನ ಮೇಲೆ, ಅಷ್ಟೊತ್ತಿಗೆ ಅಲ್ಲಿ ಸುಮಾರು ಒಂದಿಪ್ಪತ್ತೈದು ಮೂವತ್ತು ಮಂದಿ ಸೇರಿದ್ದರು. ಬೇಸಗೆಯನ್ನು ಸ್ವಾಗತಿಸುವ ಸಂಭ್ರಮ ಹೇಗೆ ಅವರ ವೇಷ ಭೂಷಣಗಳಿಗೂ ಸಾಂಕ್ರಾಮಿಕವಾಗಿ ಹರಡಿತ್ತೂಂತ! ಅಯ್ಯೋ ರಾಮ! ಭೂಷಣ ಅಂದೆನೇ! ವೇಷಕ್ಕೇ ಸಂಚಕಾರವಿದ್ದ ಹಾಗೆ ಕಾಣ್ತಿದ್ದಾಗ ಇನ್ನು ಭೂಷಣ ಎಲ್ಲಿಂದ ಬರಬೇಕು ಪಾಪ! ಅಲ್ಲದೆ, ಹೇಳೀ ಕೇಳೀ ಇವರಿಗೆ ಈಗ ಬೇಸಗೆಯಲ್ವೇ?

ಅಲ್ಲಿ, ಸುತ್ತಲೂ ಹೂವಿನ ಗಿಡಗಳ ಅಂಚು ಕಟ್ಟಿದ್ದ ಹಚ್ಚಹಸಿರು ಲಾನಿನ ಮೇಲೆ ನಮ್ಮ ಡ್ರೈವ್ ಇನ್ ಹೋಟೆಲುಗಳಲ್ಲಿ ಇರೋ ಥರಾ ಬಣ್ಣಬಣ್ಣದ ನಾಲ್ಕು ದೊಡ್ಡ ಛತ್ರಿಗಳು, ಒಂದು ಪಕ್ಕದಲ್ಲಿ ತೆಳುವಾದ ಸೊಳ್ಳೆ ಪರದೆಯಂಥ ಅಚ್ಚ ಬಿಳೀ ಜಾಲರಿ ತೊಟ್ಟಿದ್ದ ಮಂಟಪ, ಪರ್ಗೋಲಾ ಅಂತಾರಂತೆ ಇಲ್ಲಿದಕ್ಕೆ. ಅಲ್ಲಲ್ಲಿ ನಿಲ್ಲಿಸಿದ್ದ ಉದ್ದನೆಯ ಕೋಲುಗಳ ತುದಿಗೆ ಸಿಕ್ಕಿಸಿದ್ದ ಚಿಕ್ಕ ಚಿಕ್ಕ ಪಂಜುಗಳು! ಮಟ ಮಟ ಮಧ್ಯಾಹ್ನದಲ್ಲಿ ಪಂಜುಗಳೇ ಅಂತಂದ್ರಾ? ನಮ್ಮಲ್ಲಿ ಸೊಳ್ಳೆಬತ್ತಿಗಳಿಲ್ಲವೇ ಹಾಗೇ, ಇಲ್ಲಿ ಇವುಗಳಂತೆ! ಕ್ಯಾಂಡಲ್‌ಗಳಂತೆ ಕಾಣಿಸದ ಇವುಗಳನ್ನ ಸಿಟ್ರೋನೆಲ್ಲಾ ಕ್ಯಾನ್ಡಲ್ಸ್ ಅಂತಾರಂತೆ. ಗಾರ್ಡನ್ ಪಾರ್ಟಿ ನೋಡಿ, ಅತಿಥಿಗಳಿಗೆ ಸೊಳ್ಳೆಕಾಟವಿರಬಾರದಲ್ಲ, ಅದಕ್ಕೇ ವಹಿಸಿದ ಮುಂಜಾಗ್ರತೆ.

– ಇದೆಲ್ಲಾ ಆಮೇಲೆ ಮಗನಿಂದ ಪಡೆದ ಜ್ಞಾನ ಅಂತಿಟ್ಕೊಳ್ಳಿ.

ಎಲ್ಲರೂ ಅಲ್ಲಲ್ಲೇ ಅವರವರ ಕುರ್ಚಿಗಳನ್ನ ಹಾಕ್ಕೊಂಡು ಆರಾಮ್‌ಸೆ – ಕೂತ್ಕೊಂಡೆವು. ರಾಬ್ ದಂಪತಿಗಳು ತಾವೇ ಮನೆಯಲ್ಲಿ ತಯಾರಿಸಿದ್ದ ವೈನ್ ಅನ್ನು ಲೋಟಗಳಿಗೆ ಹನಿಸಿ, ಬೇಕೆಂದವರಿಗೆಲ್ಲಾ ಕೊಟ್ಟರು. ಎಲ್ಲರೂ ತಂದಿದ್ದ ಜ್ಯೂಸ್‌ಗಳ ವಿನಿಮಯವೂ ಆಯ್ತೂನ್ನಿ, ಪಾರದರ್ಶಕ ಗಾಜಿನಂಥಹ disposable ಉದ್ದನೆಯ ಲೋಟಗಳಲ್ಲಿ.

ಹರಟೆ ಏನಿದ್ರೂ – ಈಗಷ್ಟೇ ಮುಗಿದ ಸ್ನೋ ಸುತ್ತ, ಇಲ್ಲಾ ಸ್ವಲ್ಪ ಬೇಗಲೇ ಶುರುವಾಗುವಂತಿರುವ ಬೇಸಗೆಯ ಸುತ್ತ – ಗಿರಕಿ ಹೊಡೀತಿತ್ತು. ನಂಗೇ ಕೇಳಿಸಿದ ಹಾಗೇ ಸ್ವಲ್ಪ ಬೇರೆ ಟಾಪಿಕ್ ಅಂದ್ರೆ, ಪಕ್ಕದ ಮನೆ ಹೆರಾಲ್ಡ್ ಎದುರು ಮನೆ ನಿಕ್‌ಗೆ ಅವರ ಮನೆಯ ಲಾನಿನ ಕಳೆ ತೆಗೆಯಕ್ಕೆ ಯಾವ ವೀಡಿಸೈಡ್ ಚೆನ್ನ ಅಂತ ವಿವರಿಸಿದ್ದು! ಹಿಂದ್ಗಡೆ ಮನೆ ಎರಿಕ್ ತನ್ನ ಮನೆಯ ಟ್ಯೂಲಿಪ್ ಮತ್ತು ಗಾರ್ಡನಿಯ ಹೂಗಿಡಗಳಲ್ಲಿ ಈಬಾರಿ ದೊಡ್ಡ ಹೂ ಅರಳಲು ತಾನೇನೇನು ಮಾಡಿದೇಂತ ಸ್ವಲ್ಪ ಹೊತ್ತು ಕೊರೆದಿದ್ದು! ಆಚೆಮನೆ ಜಾನ್ ಅವರೆದುರು ಮನೆ ಪೀಟ್ ಜೊತೆ ತಮ್ಮನೆಯ ತಾರಸಿ ರಿಪೇರಿಗೆ ಹೊಸಾ ಶಿನ್ಗಲ್ಸ್ ಹಾಕಿಸಿದ್ದರ ಬಗ್ಗೆ ಡಿಸ್ಕಸ್ ಮಾಡ್ತಿದ್ದಿದ್ದು ಇತ್ಯಾದಿ ಇತ್ಯಾದಿ..!

ಅಲ್ಲಾ, ಯಾವ ಪಾರ್ಟಿಯ ಯಾರು ಯಾರ ಬಳಿ ಹೇಗೆ ಲಾಬಿ ನಡೆಸಿದ್ದಾರೆ? ರೆಸಾರ್ಟ್‌ಗಳಲ್ಲಿ ನಡೆಯುವ ಕುದುರೆ ವ್ಯಾಪಾರದ ನಿಜವಾದ ರೇಟೇನಿರಬಹುದು? ಬಿಡಿಏನಲ್ಲಿ ನಿಮ್ಮ ಫೈಲು ತೆಗೆಸಬೇಕಾದರೆ ಎಷ್ಟು ಪೀಕಬೇಕು? ಉಹು, ಅಂಥಹ ಒಂದೊಂದ್ರೆ ಒಂದೂ ರೋಚಕ ಮಾಹಿತಿಗಳು ಬೇಡವೇ! ಹೆಂಗಸರೂ ಅಷ್ಟೇ!.. ಆ ಸಿನೆಮಾ ಹೀರೋಯಿನ್ನಿನ ಡೈವೋರ್ಸ್ ಆಯ್ತೋ ಇಲ್ವೋ ಅಂತಾಗ್ಲೀ, ಇಲ್ಲ ಅಂಬೊಡೆಗೆ ಕ್ಯಾರೆಟ್ಟು ನವಿಲುಕೋಸು ತುರಿದು ಹಾಕಬಹುದೇನ್ತಾಗ್ಲಿ, ಕೊನೇಪಕ್ಷ ಆ ಸೀರಿಯಲ್ಲಿನ ನವವಧುವಿನ ನೆಕ್ಲೇಸು ತನಿಷ್ಕಿನ್ದೋ ಇಲ್ಲಾ ಫೋರ್ತ್ ಬ್ಲಾಕಿನ ಭವಾನಿ ಬ್ಯಾನ್ಗಲ್ ಸ್ಟೋರ್ಸಿಂದೋ .. ಅಂತ್ಲೇ ಆಗ್ಲಿ – ಒಂದ್ನೂ ಕೇಳಬೇಡಿ!

ಇನ್ನು ಮಕ್ಕಳುಮರಿಗಳು ಅವರ ನಾಯಿ–ಬೆಕ್ಕಿನ ಮರಿಗಳ ಜೊತೆಯಲ್ಲಿ ಚೆಂಡು, ಆಟಿಕೆಗಳು, ಇಲ್ಲದೇದ್ರೆ ಅವರಿಗಾಗಿ ತರಿಸಿಟ್ಟಿದ್ದ ನೀರಿನ ಫೌಂಟನ್ನುಗಳಲ್ಲಿ ಕಿತ್ತಾಡದೇ ಆಡ್ತಿದ್ವು.

ಸ್ವಲ್ಪ ಹೊತ್ತಾದ ಮೇಲೆ ಒಬ್ಬೊಬ್ಬರೇ, ಇಬ್ಬಿಬ್ಬರೇ ಪರ್ಗೋಲಾ ಒಳಗೆ ಹೋಗಿ ತಮ್ಮ ತಮ್ಮ ಶಕ್ತ್ಯಾನುಸಾರ ಐಸ್‌ಕ್ರೀಮು, ಫ್ರೂಟ್‌ಸಲಾಡ್‌ಗಳನ್ನು ದೊಡ್ಡ ಬೋಗುಣಿಯಂತಹ ಪ್ಲಾಸ್ಟಿಕ್ ಬೌಲುಗಳಲ್ಲಿ ತುಂಬಿಸಿಕೊಂಡು ಬಂದು, ಹರಟೆಯಲ್ಲಿ ಮಗ್ನರಾದರು. ಹರಟೆಯ ಬಗ್ಗೆ ಹೇಳುಲ್ಲವೇ ಅಂದ್ರಾ? ಅಯ್ಯೋ ಮತ್ತೆ ಬೇಡಬಿಡಿ, ಅದೇನೋ ಅಂತಾರಲ್ಲ – ಪುಣ್ಯಕ್ಕಿಲ್ಲ ಪುರುಷಾರ್ಥಕ್ಕಿಲ್ಲ ಅಂತ, ಹಾಗೆ!

ಸ್ವಲ್ಪ ಹೊತ್ತಾದ ಮೇಲೆ ನಾವಿಬ್ಬರೂನೂ ಪರ್ಗೋಲಾ ಒಳಗೆ ಹೋದ್ವಿ. ಅಲ್ಲಿ ನೋಡಿದ್ರೆ ಇಂದ್ರಲೋಕದಿಂದ ಭವ್ಯವಾದ ಐಸ್‌ಕ್ರೀಮ್ ಪಾರ್ಲರೊಂದು ಬಂದಿಳಿದ ಹಾಗಿತ್ತು. ಗಾಜಿನ ಕೇಸುಗಳಲ್ಲಿ ನೀಟಾಗಿ ಜೋಡಿಸಿಟ್ಟಿದ್ದ ಒಂದಿಪ್ಪತ್ತೆಂಟು ಥರದ ಐಸ್‌ಕ್ರೀಮುಗಳು, ಅದರ ಮೇಲಿನ ಟಾಪಿಂಗ್‌ಗಾಗಿ ಅದರ ಪಕ್ಕದಲ್ಲಿ ಅಚ್ಚುಕಟ್ಟಾಗಿ ಇರಿಸಿದ್ದ ದ್ರಾಕ್ಷಿ, ಬಾದಾಮಿ, ವಾಲ್‌ನಟ್ಟು, ಪೀಕನ್ಸ್ ಪುಡಿಗಳು, ನಮ್ಮ ಓಂಪುಡಿಯನ್ನು ಹೋಲುವ ಚಾಕಲೇಟಿನ ಸುರುಳಿಗಳು, ಅಣಿಯಾಗಿ ಹೆಚ್ಚಿರಿಸಿದ್ದ ವಿವಿಧ ಬಗೆಯ ಹಣ್ಣಿನ ಹೋಳುಗಳು, ಮತ್ತು ಅವೆಲ್ಲದರ ಮಧ್ಯದಲ್ಲಿ, ಒಂದೇ ಸಮ ಸಣ್ಣದಾಗಿ ಸುರಿಯುತ್ತಿದ್ದ ಚಾಕಲೇಟ್ ಸಾಸಿನ ಒಂದು ಪುಟ್ಟ ಫೌಂಟನ್ನು ಬೇರೆ!

ನೂಕುನುಗ್ಗಲಿಲ್ಲ! ಸರತಿಯ ಸಾಲಿಲ್ಲ! ನಮ್ಮ ಗಾತ್ರವನ್ನೇ ವಂಡರಗಣ್ಣಲ್ಲಿ ಅಳೆಯುತ್ತಾ, ನಮ್ಮ ಗಿಲ್ಟನ್ನು ಹೆಚ್ಚಿಸುವ (ಅದೃಷ್ಟವಿದ್ದರೆ) ದೇಶಾವರದ ನಗೆ ನಗುತ್ತಾ ಬಡಿಸುವವರಂತೂ ಇಲ್ವೇ ಇಲ್ಲ! ಎಲ್ಲವೂ ಸಮೃದ್ಧ, ಸ್ವಚ್ಛಂದ! ತಿಂದಾದ ಮೇಲೆ ಎಲ್ಲಾರೂ ತಮ್ಮ ತಮ್ಮ ಬೌಲು, ಚಮಚಗಳನ್ನ ಅಲ್ಲೇ ಸ್ವಲ್ಪ ದೂರದಲ್ಲಿರಿಸಿದ್ದ ಮುಚ್ಚಳವಿದ್ದ ದೊಡ್ಡದೊಂದು trash canಗೆ ಹಾಕಿದ್ರಾಯ್ತು.

ಹೀಗೇ ನಾಲ್ಕೂವರೆವರ್ಗೂ ಸಂಭ್ರಮದಿಂದ ಎಲ್ಲರೂ ವಸಂತನ್ನ ಬರಮಾಡಿದ್ದೇ ಮಾಡಿಕೊಂಡದ್ದು! ಆಮೇಲೆ, ಹರಟೆ ಹೊಡೀತಾ ಕೂತಿದ್ದ ಎಲ್ಲಾರೂ, ಘಂಟೆ ಶಬ್ದ ಕೇಳಿಸಿದ ಸಿಂಡ್ರೆಲಾ ತರಹ ಇದ್ದಕ್ಕಿದ್ದ ಹಾಗೆ ಸರಸರಾಂತ ಅವರವರ ಕುರ್ಚಿಗಳನ್ನೆತ್ತಿಕೊಂಡು, ಥ್ಯಾಂಕ್ಸ್ ಹೇಳಿ, ಬೈ ಅನ್ತಾ ಹೊರಟೇಬಿಟ್ಟರು! ಮಕ್ಕಳೂ ಸಹ ಇನ್ನೂ ಸ್ವಲ್ಪ ಹೊತ್ತು ಇರೋಣಾಂತ ಗಲಾಟೆ ಮಾಡಬೇಕಲ್ಲ!

ಅಲ್ಲ! ಆನಾಡಿ ಜನಗಳನ್ನ ಕರೆದರೂ, ಶಾಮಿಯಾನ, ಕುರ್ಚಿಗಳು, ವೆಲ್‌ಕಮ್ ಡ್ರಿಂಕು, ಅದರ ಜೊತೆಗೇಂತ ಚಿಪ್ಸು, ಹೊಟ್ಟೆ ಕೆಡಿಸುವ ಇತರೇ ಕುರುಕಲು ತಿಂಡಿಗಳು, ಬಾಳೇಹಣ್ಣು, ಬೀಡಾ, ತಾಂಬೂಲ – ಅಂತೆಲ್ಲಾ ಒಂದು ಚೂರೂ ಒದ್ದಾಡಿಕೊಳ್ಳದೆ ಎಷ್ಟು ಸಲೀಸಾಗಿ ಅಷ್ಟು ದೊಡ್ಡ ಪಾರ್ಟಿ ಮಾಡಿ ಮುಗಿಸಿಬಿಟ್ಟರಲ್ಲ ಅಂತ ಇವರ ಇನ್ಫಾರ್ಮಲ್ ರೀತಿನೀತಿಗಳ ಬಗ್ಗೆ ಸ್ವಲ್ಪ ಅಸೂಯೆಯೇ ಆಯ್ತೂನ್ನಿ.

ಇದೇನು, ನಮ್ಮೂರಿನ ಶಾಸಕರ ತರ ಎಷ್ಟು ಬೇಗ ಬಣ್ಣ ಬದಲಾಯಿಸಿಬಿಟ್ಟಿರಿ ಅಂದ್ರಾ? ಒಳ್ಳೇ ಚೆನ್ನಾಯ್ತು. ನೀವೂ ಸರಿ!

ನಮ್ಮಜ್ಜಿ ಹೇಳ್ತಿದ್ದ ಹಾಗೇ – ಗುಣಕ್ಕೆ ಮತ್ಸರವೇ?

✵

# ನಡುರಾತ್ರಿಯಲ್ಲಿ ಮನಸ್ಸು ಅರಳಿಸುವಾತ.... !

**- ಗುರು**

**ನ**ನ್ನ ಸರ್ವೀಸಿನಲ್ಲಿ ನನ್ನ ಮೇಲೆ ಪ್ರಭಾವ ಬೀರಿದವರು ಹಲವರು ಇರುವ ಹಾಗೆಯೇ ನನಗೆ ತಮಾಷೆ ವಸ್ತುವಾಗಿ ಕಂಡ ಸುಮಾರು ಸಹೋದ್ಯೋಗಿಗಳು ಇದ್ದಾರೆ. ಅವರಲ್ಲಿ ನನಗೆ ಥಟ್ಟನೆ ನೆನಪಿಗೆ ಬರುವುದು ನಮ್ಮ ಸ್ವಾಮಿಯದ್ದು. ಸ್ವಾಮಿಗೂ ನನಗೂ ಪರಿಚಯವಾಗುವ ಹೊತ್ತಿಗೆ ಆತ ಸುಮಾರು ವರ್ಷ ಸರ್ವೀಸು ಹಾಕಿದ್ದ ಮತ್ತು ಆತನ ವಿಲಕ್ಷಣತೆಯಿಂದ ಹೆಸರೂ ಮಾಡಿದ್ದ. ನನ್ನೊಂದಿಗೆ ಆತನನ್ನು ಸೇರಿಸುವುದು ಗೊತ್ತಾದಾಗ ನನ್ನ ಕೆಲವು ಸ್ನೇಹಿತರು ಅದು ಹ್ಯಾಗೆ ಅವನ ಸಂಗಡ ಕೆಲಸ ನಿರ್ವಹಿಸುತ್ತೀಯೋ ನಿನ್ನ ಇತರೆ ಚಟುವಟಿಕೆಗಳಿಗೆ ಬ್ರೇಕು ಬೀಳುತ್ತೆ ಅಂತ ಪರೋಕ್ಷವಾಗಿ ಸಂತೋಷಿಸಿದ್ದರು. ಎಂಥೆಂಥಹವರ ಹತ್ತಿರವ್ರೋ ಕೆಲಸ ಮಾಡಿದೀನಿ, ನನಗೇನೂ ಹೊರೆಯಾಗಲ್ಲ ಅಂತ ಧೈರ್ಯವಾಗಿಯೇ ಸ್ವಾಮಿಯನ್ನು ಸ್ವಾಗತಿಸಿದ್ದೆ. ಹೀಗೆ ಸ್ವಾಮಿ ನನಗೆ ಗಂಟು ಬಿದ್ದದ್ದು.

ಸ್ವಾಮಿ ಡಿಪ್ಲೊಮೊ ಓದಿದ್ದ, ಆದರೆ ಮನಸ್ಸು ಮಾತ್ರ ಹಸುಗೂಸಿನದ್ದು. ಅವನ ನಂಬಿಕೆಗಳು ನಡಾವಳಿಗಳು ವಿಚಿತ್ರವಾದವು. ಮೊದಲ ದಿವಸ ಇವನು ಸೆಕ್ಷನ್ನಿಗೆ ಕಾಲಿಟ್ಟಾಗ ಅವನ ಕೈಲಿ ಒಂದು ದೊಡ್ಡ ಕ್ಯಾರಿಯರು. ಬಹುಷಃ ಹೊಸ ಸೆಕ್ಷನ್ನಿಗೆ ಬರ್ತಿದಾನೆ ಅದರಿಂದ ನಮಗೆ ಪಾರ್ಟಿ ಕೊಡ್ತಿದಾನೆ ಅಂತ ಭಾವಿಸಿದ್ದೆ. ಕ್ಯಾರಿಯರ್ ಯಾವಾಗ ಬಿಚ್ಚುತ್ತಾನೆ ಅಂತ ಕಾಯುತ್ತಿದ್ದೆ. ಬೆಳಿಗ್ಗೆ ಸೆಕ್ಷನ್ನಿಗೆ ಬಂದ, ಕಾಫಿ ಬ್ರೆಡ್ಡು ತಿಂದ, ಕ್ಯಾರಿಯರ್ ತೆಗೆಯಲಿಲ್ಲ. ಅಷ್ಟರಲ್ಲಿ ಬ್ಯಾಗಿನಲ್ಲಿ ತಂದಿದ್ದ ಸುಮಾರು ಕ್ಯಾಲೆಂಡರ್ ದೇವತೆಗಳನ್ನು ಗೋಡೆ ಮೇಲೆ ಅಂಟಿಸಿದ್ದ. ಮತ್ತೊಬ್ಬರ ಧಾರ್ಮಿಕ ಮನೋಭಾವನೆಗಳಿಗೆ ಅಡ್ಡಿ ಮಾಡದ ಜಾಯಮಾನ ರೂಢಿಸಿಕೊಂಡಿದ್ದೆ, ಅದರಿಂದ ಅವನು ಮಾಡುವುದನ್ನು ಕಿರುಗಣ್ಣಿನಲ್ಲಿಯೇ ನೋಡುತ್ತಾ ಇದ್ದೆ. ನಂತರ ಬ್ಯಾಗಿನಿಂದ ಕ್ಯಾರಿಯರ್ ತೆಗೆದ. ಕ್ಯಾರಿಯರ್ ನೋಡಿದ ಕೂಡಲೇ ಬಾಯಿಯಲ್ಲಿ ನೀರೂಡಲು ಆರಂಭವಾಯಿತು. ಕ್ಯಾರಿಯರ್ ನಿಧಾನಕ್ಕೆ ಬಿಚ್ಚಿದ – ಎಲ್ಲವೂ ಖಾಲಿ! ದೊಡ್ಡ ಕ್ಯಾರಿಯರ್‌ನಿಂದ ಒಂದು ಪುಟ್ಟದು ತೆಗೆದ, ಅದರೊಳಗೆ ಮತ್ತೊಂದು..ಹೀಗೆ ನಾಲ್ಕು ಆಚೆ ಇಟ್ಟ ಕುತೂಹಲದಿಂದ ನಾನು ನೋಡುತ್ತಲೇ ಇದೀನಿ.ಒಂದು ಮುಚ್ಚಿದ್ದ ಡಬ್ಬಿ ಹೊರಗಡೆಗೆ ಇಟ್ಟು ಮಿಕ್ಕವುಗಳನ್ನು ಕೈಲಿ ಹಿಡಿದು ಆಚೆ ಹೊರಟ. ಎರಡೂವರೆ ಗಂಟೆ ಬಿಟ್ಟು ಕ್ಯಾರಿಯರ್ ಸಮೇತ ಬಂದ,ಊಟಕ್ಕೆ ಸಮಯವಾಯಿತು, ಅದನ್ನು ಮುಗಿಸಲು ಹೋದ. ಊಟ ಮುಗಿಸಿ ಬಂದವನು ಒಂದು ಸ್ಟೂಲು ಎಳೆದು ಅದರ ಮೇಲೆ ಕೂತ. ಕ್ಯಾರಿಯರ್ ಓಪನ್ ಮಾಡಿ ಅದರಿಂದ ಹುಲ್ಲು ಆಚೆ ಸುರಿದ. ಇದೇನು ಇಷ್ಟೊಂದು ಹುಲ್ಲು? ಎಲ್ಲಿಂದ

ತಂದೆ ಅಂದೆ. ಗಾರ್ಡನ್ ಗೆ ಹೋಗಿದ್ದೆ ಅಪ್ಪಾ, ಅಲ್ಲಿ ಮಸ್ತಾಗಿ ಹುಲ್ಲು ಬೆಳೀತಾರೆ ಅಲ್ಲಿಂದ ತಂದೆ ಅಂದ. ಕೂತು ಮತ್ತೊಂದು ಡಬ್ಬಿ ತೆಗೆದ, ಅದರಿಂದ ಮತ್ತೊಂದು ಪ್ಲಾಸ್ಟಿಕ್ ಡಬ್ಬಿ ಆಚೆ ಇಟ್ಟ, ಅದರಿಂದ ಒಂದು ದಾರದ ಉಂಡೆ ಆಚೆ ಇಟ್ಟ, ನಂತರ ಸೂಜಿ ಹೊರಗೆ ಬಂತು. ಸುರಿದಿದ್ದ ಹುಲ್ಲು ರಾಶಿಯಿಂದ ಹುಲ್ಲು ಜೋಡಿಸಲು ಶುರು ಹಚ್ಚಿದ. ಒಂದು ಕತ್ರಿ ತಗೊಂಡು ಒಂದೇ ಅಳತೆಗೆ ಹುಲ್ಲನ್ನು ನೋಡೀನೋಡೀ ಕತ್ತರಿಸಿದ. ಅದನ್ನು ಹದಿನೆಂಟು ಕಂತೆ ಸೂಜಿಯಲ್ಲಿ ಪೋಣಿಸಿ ಪೋಣಿಸಿ ಮಾಡಿದ. ಟೀ ಸಮಯವಾಯಿತು. ಹೋಗಿ ಟೀ ಮುಗಿಸಿ ಬಂದ. ಶೂ, ಸಾಕ್ಸ ಬಿಚ್ಚಿದ, ಬರಿಗಾಲಿನಲ್ಲಿ ಆಚೆ ನಡೆದು ಕೈಕಾಲು ತೊಳೆದುಕೊಂಡು ಬಂದ, ಗೋಡೆಗಳ ಮೇಲೆ ಅಂಟಿಸಿದ್ದ ಹದಿನೆಂಟು ದೇವರಿಗೆ ಸ್ಟೂಲಿನ ಮೇಲೆ ಹತ್ತಿ ಒಂದೊಂದಾಗಿ ಈ ಹುಲ್ಲು ಗರಿಗಳನ್ನ ಸಿಕ್ಕಿಸಿದ.ಒಂದು ಊದುಕಡ್ಡಿ ತೆಗೆದುಕೊಂಡು ಹಚ್ಚಿ ಅದರ ಹೊಗೆಯನ್ನು ಎಲ್ಲಾ ದೇವತೆಗಳಿಗೂ ನಿವಾಳಿಸಿದ. ಊದು ಕಡ್ಡಿ ಆರಿಸಿ ಅದನ್ನ ಒಂದು ಡಬ್ಬಿಯಲ್ಲಿಟ್ಟ ದಾರ ತೆಗೆದು ಮತ್ತೊಂದು ಡಬ್ಬಿಯಲ್ಲಿಟ್ಟ ಇವೆರೆಡನ್ನೂ ಇನ್ನೊಂದು ಡಬ್ಬಿಗೆ ಸೇರಿಸಿದ... ಅದ್ಯಾಕೆ ಹುಲ್ಲು ಗರಿ ಮಾಡಿದೀರೀ ಅಂತ ತಡೆಯಲಾರದೆ ಕೇಳಿದೆ. ಗರಿಕೆಗೆ ತ್ರಿಶೂಲದ ರೀತಿ ಮೂರು ಎಸಳು ಇರಬೇಕು ಅದನ್ನೇ ಹುಡುಕಿ ಕಟ್ಟಿದ್ದು,ಗಣೇಶನಿಗೆ ಅದು ತುಂಬಾ ಪ್ರೀತಿ, ಅಷ್ಟೇ ಅಲ್ಲ ಎಲ್ಲಾ ದೇವರಿಗೂ ಅದು ತುಂಬಾ ಇಷ್ಟವಾದದ್ದು... ಅಂದ ! ತೆಗೆದು ನಾಲಕ್ಕು ಬಾರಿಸಲೇ ಅನಿಸಿತು. ತೆಪ್ಪಗಾದೆ,ಮೊದಲನೇ ದಿವಸ ಅಂತ. ಕುತೂಹಲ ತುಂಬಾ ಕೆಟ್ಟದ್ದು ನೋಡಿ ಇವನ ಮುಂದಿನ ಅವತಾರ ಏನಿರಬಹುದು ಅಂತ ಕಾದೆ. ಕಾರ್ಖಾನೆ ಸಮಯ ಮುಗಿಯಲು ಸೈರನ್ ಆಗಲು ಇನ್ನೂ ನಲವತ್ತು ನಿಮಿಷ ಇತ್ತು. ಶೂ ಏರಿಸಿದ, ಖಾಲಿ ಡಬ್ಬಿ ಇಟ್ಟುಕೊಂಡು ಆಚೆ ಹೋದ. ಅರ್ಧ ಗಂಟೇಲಿ ವಾಪಸ್ಸಾದ, ಕ್ಯಾರಿಯರ್ ತುಂಬಾ ಮತ್ತೆ ಗರಿಕೆ ಹುಲ್ಲು ! ಇದ್ಯಾಕೆ ಸ್ವಾಮಿ? ಅಂದೆ. ಮನೇಲಿ ದೇವರು ಇಲ್ಲವಾ ಅದಕ್ಕೆ ಪೂಜೆ ಮಾಡೋದು ಬೇಡವಾ? ಅಂತ ಪ್ರಶ್ನೆ ಹಾಕಿದ! ಸರಿ ಇಂಥಹ ಸುಂದರವಾದ ಕಥೆಯನ್ನು ಹಂಚಿಕೊಳ್ಳದಿದ್ದರೆ ಹೇಗೆ? ಸುಮಾರು ಜನರ ಹತ್ತಿರ ಈ ಖುಷಿಯನ್ನು ಹಂಚಿಕೊಂಡೆ.ಅವರುಗಳು ಬಿದ್ದು ಬಿದ್ದು ನಕ್ಕರು.ಒಂದು ಸೂಕ್ಷ್ಮವನ್ನೂ ಹೇಳಿದರು.ಇದು ಬಿಗಿನಿಂಗು ಮುಂದೆ ನೋಡು ಅಂತ.. ಅದರ ಜತೆಗೆ ಪ್ರತಿವರ್ಷ ಈ ದೇವತೆಗಳು ಹೆಚ್ಚುತ್ತಲೇ ಹೋದರು – ಇಡೀ ನಾಲ್ಕು ಗೋಡೆಗಳನ್ನು ಆಕ್ರಮಿಸಿಬಿಟ್ಟವು. ಪ್ರತಿದಿವಸ ಈ ಪರಿಪಾಟು (ಸುಮಾರು ಹದಿನೈದು ವರ್ಷ ಅವನು ನನ್ನ ಜತೆ ಇದ್ದದ್ದು) ಮುಂದುವರೆದ ಹಾಗೆ ಸ್ವಾಮಿ ನನಗೆ ತುಂಬಾ ಆಪ್ತನಾಗಿಬಿಟ್ಟ. ಕಾರ್ಖಾನೆ ಕೆಲಸ ಒಂದು ಚೂರೂ ಆಗದೇ ಇದ್ದರೂ ಅವನ ಮುಗ್ಧತೆ ನನ್ನನ್ನು ಸೆಳೆದಿತ್ತು. ಅವನ ಪಾಲಿನ ಕೆಲಸ ನಾವು ಯಾರೋ ಮಾಡಿ ಮುಗಿಸುತ್ತಿದ್ದೆವು. ಅವನು ಕುತೂಹಲದಿಂದ ನಾನು ತಿಳಿದವನು ಎಂದು ಕೇಳುತ್ತಿದ್ದ ಪ್ರಶ್ನೆಗಳೂ ಕೂಡ ಕೆಲವು ಸಲ ನಾನೆಂಥಹ ಪೆದ್ದ ಅನಿಸಿಬಿಡೋದು. ಅವನ ಪ್ರಶ್ನೆಗಳು – ಪಂಚ ಮಹಾವೃಕ್ಷಗಳು ಯಾವುದು? ನಾನು ಹಲಸು, ಮಾವು, ದಾಳಿಂಬೆ, ಸೀಬೆ, ಚಕ್ಕೋತ ಎಂದು ಉತ್ತರಿಸಿದೆ ಅನ್ನಿ, ಅಯ್ಯೋ ಅದಲ್ಲಾ ಅಪ್ಪಾ ಪಂಚ ಮಹಾವೃಕ್ಷಗಳು

ಯಾವುದು ಗೊತ್ತಾ ಅಂತ ಉತ್ತರ ತಿಳಿಸೋನು. ಪಂಚ ಮಹಾವೀರರು ಯಾರು, ಪಂಚ ಗಿಡಗಳು ಯಾವುದು, ಪಂಚ ಪತಿವ್ರತೆಯರು ಯಾರು, ಭೋಧಿಸತ್ವ ಅಂದರೇನು, ಮಧ್ವ ಪುರಾಣದಲ್ಲಿ ಹಸು ಮಾತಾಡುತ್ತೆ ಗೊತ್ತಾ ? ದೇವರು ಮನಸ್ಸು ಮಾಡಿದರೆ ಸೂಜಿ ಕಣ್ಣಲ್ಲಿ ಆನೆಯಾಗಿ ಆಚೆ ಬರುತ್ತೆ ಗೊತ್ತಾ.... ಈ ರೀತಿಯ ವಿಚಿತ್ರವಾದ ಅನಿಸಿಕೆಗಳು ಅವನ ಬಾಯಿನಿಂದ ಕೇಳಿದರೇನೇ ಚೆಂದ. ನಾನು ಹೀಗೆ ನನ್ನ ಜೀವನ ಚೆಂದ ಮಾಡಿಕೊಂಡಿದ್ದರೆ ಕೆಲವರಿಗೆ ಕುತೂಹಲ ಇವನ ಹತ್ತಿರ ಅದು ಹೇಗೆ ಕೆಲಸ ತೆಗೀತಿದಾನೆ ಇವನು ಅಂತ.

ಮತ್ತೊಂದು ಸ್ವಾಮಿ ನನಗೆ ಕೊಟ್ಟ ಕೊಡುಗೆ ಅಂದರೆ ನನ್ನ ಬರವಣಿಗೆ ಇಂಪ್ರೋ ಮಾಡಿದ್ದು. ಯಾವುದಾದರೂ ಪುರಾಣದ ಹಾಳೆ ತಂದು ಎದುರಿಗೆ ಇಟ್ಟು ಅಪ್ಪಾ ಇದನ್ನು ಸ್ವಲ್ಪ ಬರೆದುಕೊಡು ಎಂದು ದೈನ್ಯದಿಂದ ಕೇಳಿಕೊಳ್ಳುವನು. ಆಗೋಲ್ಲ ಅಂತ ಹೇಳಲು ಆಗದೇ ಬರೆದು ಕೊಡ್ತಾ ಇದ್ದೆ. ಒಂದು ಸಲ ಮಾತ್ರಾ ಅಸಾಧ್ಯ ಕೋಪ ಬಂದಿತ್ತು–ನನಗೆ ಅವನು ಲೀವ್ ಅಪ್ಲಿಕೇಷನ್ ತಂದು ನನ್ನ ಮುಂದೆ ಇಟ್ಟು ಇದನ್ನ ತುಂಬಿ ಕೊಡಿ ಅಂದ. ಯಾಕೆ ನಿನಗೆ ಬರೋಲ್ಲವಾ ಇದನ್ನ ತುಂಬಿಸೋಕ್ಕೆ? ಇಷ್ಟು ವರ್ಷ ಸರ್ವೀಸಾಗಿದೆ? ಇಷ್ಟು ದಿವಸ ಏನು ಮಾಡ್ತಾ ಇದ್ದಿ ಅಂತ ರೇಗಿದ್ದೆ.

ಹಳೇ ಸೆಕ್ಷನ್ ನಲ್ಲಿ ಯಾರೋ ಬಕರಾ ತುಂಬಿ ಕೊಡ್ತಾ ಇದ್ದ .ಇಲ್ಲಿ ನಿನಗೆ ಏನೇನೋ ಬರುತ್ತಲ್ಲಾ ಅದಕ್ಕೆ ಕೇಳಿದೆ ಅಂದ. ನಾನು ಬಕರಾ ಅಲ್ಲಾ ಅದೂ ಅಲ್ಲದೇ ನನಗೆ ಬರೋದೆಲ್ಲಾ ಮಾಡ್ತಾ ಹೋದರೆ ಅದಕ್ಕೆ ಮಿತಿ ಇರುಲ್ಲ, ಬಾ ಇಲ್ಲಿ ಇದನ್ನ ಭರ್ತಿ ಮಾಡೋದು ಹೇಳಿಕೊಡ್ತೀನಿ ಅಂತ ಕೂಡಿಸಿಕೊಂಡು ಅದನ್ನ ಹೇಳಿಕೊಟ್ಟೆ! ಬಹುಷಃ ಅವನು ನನ್ನ ಬಳಿ ಕಲಿತಿದ್ದು ಇದೊಂದೇ ಅಂತ ಕಾಣುತ್ತೆ!

ಅವನ ಫೋಟೋ ಹುಚ್ಚಿಗೆ ಅಂತ್ಯ ಕಾಣಿಸಿದ್ದು ನಿಮಗೆ ಹೇಳಬೇಕು. ಕಾರ್ಖಾನೆಗಳಲ್ಲಿ ಸುಣ್ಣ ಬಣ್ಣ ಆಗುವುದು ತುಂಬಾ ನಿಯತವಾಗಿ. ಸ್ವಾಮಿ ನನ್ನ ಸಂಗಡ ಬರುವ ಕೆಲವೇ ದಿವಸಗಳ ಮೊದಲು ಈ ಕೆಲಸ ಮುಗಿದಿತ್ತು. ನಂತರ ನಾಲ್ಕೋ ಐದೋ ವರ್ಷಕ್ಕೆ ಸುಣ್ಣಬಣ್ಣವಾಗಬೇಕಾದರೆ ಫೋಟೋಗಳು ತುಂಬಾ ಹಳೇದಾಗಿವೆ ಬೇರೆ ತರೋಣಾ ಅಂತ ಹೇಳಿ ಈ ಕ್ಯಾಲೆಂಡರು ದೇವತೆಗಳಿಗೆ ವಿಮೋಚನೆಗೊಳಿಸಿಬಿಟ್ಟೆ. ಗೋಡೆ ಬದಲಿಗೆ ಅಲ್ಯೂಮಿನಿಯಂ ಕಿಟಕಿಗಳು ಮತ್ತು ಗಾಜಿನ ಪಾರ್ಟಿಷನ್ನುಗಳನ್ನು ಅಳವಡಿಸಿಬಿಟ್ಟೆವು – ಅಂದರೆ ಫೋಟೋ ತಗುಲಿ ಹಾಕಲು ಜಾಗ ಇಲ್ಲದ ಹಾಗೆ ಆಯಿತು. ಹೊಸಾ ಫೋಟೋ ತಂದರೂ ಅದನ್ನು ತಗುಲಿಹಾಕಲು ಅಸಾಧ್ಯ ಎನ್ನು ಭಾವನೆ ಬರುವ ರೀತಿ ಮಾಡಿ ಅವನ ಈ ಹುಚ್ಚಿಗೆ ಒಂದು ಅಂತ್ಯ ಕಾಣಿಸಿದೆವು. ಅವತ್ತು ಅವನು ಪೇಚಾಡಿದಷ್ಟು ಯಾವತ್ತೂ ಪೇಚಾಡಿಲ್ಲ ಎಂದು ತೋರುತ್ತೆ. ಆದರೂ ನಂತರ ಮನೆಯಲ್ಲಿ ಇದೇ ಕಾಯಕ ಮುಂದುವರೆಸಿ ಮನೆಯವರಿಗೆ ಅದೆಷ್ಟು ಹಿಂಸೆ ಕೊಟ್ಟನೋ ಅಂತ ನಾವು ಪೇಚಾಡಿದ್ದುಂಟು!......

ನಡುರಾತ್ರಿಯಲ್ಲಿ ಸ್ವಾಮಿ ನೆನಪಿಗೆ ಬಂದು ಮನಸ್ಸು ಅರಳಿಸುತ್ತಾನೆ !



# ಕಿರಿಯನಿಗೆ ಪಾಠ.....

- ಎಚ್. ಗೋಪಾಲಕೃಷ್ಣ

**ಮು**ದುಕರಿಗೆ ನೆರವಾಗುವಂತಹ ಒಂದು ಪ್ರಸಂಗ ಮೊನ್ನೆ ನನ್ನ ಗೆಳೆಯರು ಹೇಳಿದರು – ಅದನ್ನು ಅವರು ಹೇಳಿದ ಹಾಗೆಯೇ ನಿಮ್ಮ ಮುಂದೆ ಇಡುತ್ತಾ ಇದ್ದೇನೆ.

...ರಿಟೈರು ಅಂತ ಆಯಿತಲ್ಲಾ ಅದಕ್ಕೆ ಸ್ವಲ್ಪ ಮೊದಲು ಕೊಂಚ ಹಣವನ್ನ ಯಾವುದೋ ಕಂಪನಿಯಲ್ಲಿ ತಿಂಗಳ ಬಡ್ಡಿ ಪ್ಲಾನಿನಲ್ಲಿ ಹಾಕಿದ್ದೆ. ಒಂದು ಲಕ್ಷಕ್ಕೆ ಎಂಟು ನೂರರವರೆಗೂ ತಿಂಗಳಿಗೆ ಕೊಡ್ತೀವೀಂತ ಹೇಳಿದ್ದರು. ಮೊದಲನೇ ತಿಂಗಳು ಆರುನೂರು ಬಂತು ಎರಡನೇ ತಿಂಗಳು ಐನೂರಾಯಿತು, ಆಮೇಲೆ ನಾಲ್ಕುನೂರು ಬರೋಕ್ಕೆ ಶುರುವಾಯಿತು. ಮೂರು ನಾಲ್ಕು ತಿಂಗಳು ಹೀಗೆ ಬಂದಮೇಲೆ ಕಂಪನಿಯನ್ನ ಸಂಪರ್ಕ ಮಾಡಿದೆ. ಇಷ್ಟೇ ಹಣ ಬರುತ್ತೆ ಅಂತ ಹೇಳುಕ್ಕೆ ಆಗುಲ್ಲ, ನಾವು ಮ್ಯೂಚುಯಲ್ ಫಂಡ್ಸ್ ನಲ್ಲಿ ಹಾಕಿರ್ತೀವಿ. ಅದರ ಬೆಲೆ ಮೇಲೆ ಇದು ಹೆಚ್ಚು ಕಡಿಮೆಯಾಗುತ್ತೆ ಅಂತ ನನಗೆ ವಿವರಣೆ ನೀಡಲು ಬಂದಿದ್ದ ಹುಡುಗ ಹೇಳಿದ. ಹಾಗೇ ಮಾತು ಆಡುತ್ತಾ ಅವನಿಗೆ ಗೊತ್ತಿರೋ ಫ್ರೆಂಡ್ಸು ಇದಾರೆ, ಶೇರು ಬಿಸಿನೆಸ್ಸಿನಲ್ಲಿ ಕೆಲಸ ಮಾಡ್ತಾರೆ, ಈ ಹಣವನ್ನು ಅವರ ಬಳಿ ಇಟ್ಟರೆ ತಿಂಗಳಿಗೆ ಮೂರು ಸಾವಿರದವರೆಗೆ ಬರೋ ತರಹ ಮಾಡಬಹುದು ಸಾರ್ ಅಂತ ಹೇಳಿದ. ಅದರ ಗ್ಯಾರಂಟಿ ಏನು ಅಂತ ಕೇಳಿದೆ. ಗ್ಯಾರಂಟಿ ಬೇಕಾದರೆ ನಾನು ಬರೆದುಕೊಡ್ತೀನಿ ಸಾರ್ ಅಂದ. ಅಲ್ಲಪ್ಪಾ ಅದೇನೂ ಮೋಸವಾಗುಲ್ಲವೇ? ಅಂದೆ. ಮೋಸವೇನೂ ಆಗುಲ್ಲ ಸಾರ್ ಈಗಾಗಲೇ ಸುಮಾರು ಜನ ಅದರಲ್ಲಿ ಹಾಕಿದಾರೆ – ಅಂದ. ನನಗೆ ನಂಬಿಕೆ ಬರದಿರುವುದು ನೋಡಿ ಸಾರ್, ನೀವು ನಮ್ಮ ಫಾದರ್ ಇದ್ದ ಹಾಗೆ ನಿಮಗೆ ಮೋಸ ಮಾಡುಕ್ಕೆ ಆಗುತ್ಯೇ? ನಿಮಗೆ ಹೆಚ್ಚು ಹಣ ಸಿಗಲಿ ಅಂತ ಹೇಳಿದೆ ಅಷ್ಟೇ ಬೇಕಾದರೆ ಟ್ರೈ ಮಾಡಿ ನೋಡಿ ಅಂದ. ಅದೇನೋ ಹುಮ್ಮಸ್ಸು ಸರಿ ಅಂತ ತಲೆಯಾಡಿಸಿದೆ, ಕಂಪನಿಯಲ್ಲಿ ಹಾಕಿದ್ದ ಹಣ ಅಲ್ಲಿಗೆ ರವಾನಿಸಿಯೂ ಬಿಟ್ಟೆ.

ನಾಲ್ಕು ತಿಂಗಳು ಹಣವನ್ನು ಹುಡುಗನೇ ತಂದು ನೀಡ್ತಾ ಇದ್ದ . ಆಮೇಲೆ ಅವನು ಬರೋದು ತಡವಾಯಿತು ಅಂತ ಅನಿಸಲು ಶುರುವಾಯಿತು. ರಿಟೈರು ಆದಾಗ ಬಂದಿದ್ದು ಅಂದರೆ ಗೊತ್ತಲ್ಲಾ ರಕ್ತ ಬಸಿದು ಸಂಪಾದಿಸಿದ್ದು ಹೆಚ್ಚಿನ ಬಡ್ಡಿಗೆ ಆಸೆ ಬಿದ್ದು ಅಸಲು ಖೋತಾ ಆಯಿತೇ, ಟೋಪಿ ಬಿದ್ದೇನೋ ಅನಿಸಲು ಶುರುವಾಯಿತು. ಹೇಳಿಕೊಳ್ಳುವ ಹಾಗಿಲ್ಲ ಅನುಭವಿಸುವ ಹಾಗಿಲ್ಲ ಹಾಗಾಯಿತು ನನ್ನ ಪರಿಸ್ಥಿತಿ.

ಎರಡು ಮೂರು ಸಲ ಹುಡುಗನಿಗೆ ಫೋನಾಯಿಸಿದೆ. ಒಂದು ಸಂಜೆ ಬಂದ, ಕೂತು ಕೊಂಡ ಸಾರ್ ನಿಮಗೆ ಹೇಳೋದಿಕ್ಕೆ ನನಗೇ ಒಂದು ಥರಾ ಆಗ್ತಾ ಇದೆ, ನಾನು ನಂಬಿದೋರು ನನಗೆ ಚೀಟ್ ಮಾಡಿದ್ದಾರೆ ಅಂತ ಅವನ ಕತೆ ಹೇಳಿದ. ಶೇರುಗಳಲ್ಲಿ ಯಾರದ್ದೋ ಹಣ ಹೂಡಬೇಕಾದರೆ ತೆಗೆದುಕೊಳ್ಳಬೇಕಾದ ರಿಸ್ಕ್ ಅನ್ನು ಇವನ ಫ್ರೆಂಡ್ಸು

ಇಗ್ನೋರ್ ಮಾಡಿದರಂತೆ, ಫೋರ್‌ಕ್ಯಾಸ್ಟ್ ನೋಡಿ ಯಾವುದರಲ್ಲೋ ಹಣ ಹೂಡಿದರು, ಅದು ಕೈ ಕಚ್ಚಿದೆ ಅಂತ ಇವನ ಹೇಳಿಕೆ ! ನನಗೆ ಐ ಅಯಾಮ್ ಲಾಸ್ಟ್ ಅಂತ ಅನಿಸಿಬಿಟ್ಟಿತು. ಅಷ್ಟೊಂದು ದುಡ್ಡು ಈ ವಯಸ್ಸಿನಲ್ಲಿ ಮತ್ತೆ ಸಂಪಾದನೆ ಮಾಡಲು ಸಾಧ್ಯವೇ ಅನ್ನುವುದು ಒಂದಾದರೆ, ಯಾರಿಗೂ ಹೇಳದೇ ಈ ಕಷ್ಟ ಮೇಲೆ ತಂದುಕೊಂಡೆ ಅನ್ನೋದು ಒಂದು ರೀತಿ. ಪೋಲೀಸಿಗೆ ದೂರು ನೀಡಿ ಇವನ ಮೇಲೆ ಚೀಟಿಂಗ್ ಕೇಸು ಹಾಕುವ ಯೋಚನೆ ಕೂಡಲೇ ಮನಸ್ಸಿಗೆ ಬಂತು. ಅದರಿಂದ ಏನು ಫಲ ಸಿಗಬಹುದು ಅಂತ ಯೋಚಿಸಿದೆ. ಹುಡುಗ ಕೆಲಸ ಕಳೆದುಕೊಳ್ಳುತ್ತಾನೆ, ಜೈಲಿಗೆ ಹೋಗುತ್ತಾನೆ ಸರಿ,ಆದರೆ ನನ್ನ ಹಣ ನನ್ನ ಕೈಗೆ ಬರುತ್ಯೇ ? ದೂರು ನೀಡಿದ ಕೂಡಲೇ ಅದು ಪೋಲೀಸರಿಗೆ ಸುದ್ದಿ ಆಗುತ್ತೆ, ಟೀವೀ ಚಾನಲ್ಲುಗಳಲ್ಲಿ ಮೋಸ ಬಿದ್ದ ಮುದುಕ ಅಂತ ನನ್ನ ಬಗ್ಗೆ ದೊಡ್ಡ ವಾರ್ತೆಯಾಗುತ್ತೆ, ಅದರಿಂದ ನನ್ನ ದುಡ್ಡು ಬರುತ್ಯೇ .... ಹೀಗೆಲ್ಲಾ ಯೋಚನೆಗಳು ನನ್ನ ಮನಸ್ಸಿಗೆ ಬಂದುಬಿಟ್ಟಿತು.

ಹುಡುಗನ್ನ ಕೂಡಿಸಿಕೊಂಡೆ, ನೋಡಪ್ಪಾ ನೀನು ಅವತ್ತು ಬಂದಾಗ ನಾನು ನಿಮ್ಮ ಫಾದರ್ ತರಹ ಅಂತ ಹೇಳಿದ್ದೆ ಈಗಲೂ ಅದೇ ಭಾವನೆ ನಿನಗಿದೆ ತಾನೇ ಅಂತ ಮಾತು ಶುರು ಮಾಡಿದೆ. ಹೌದು ಸಾರ್, ನಿಮಗೆ ಹೇಳದೇ ಕೇಳದೇ ನಾನು ಓಡಿಬಿಡಬಹುದಾಗಿತ್ತು... ಹಾಗೆ ಮಾಡಲಿಲ್ಲ.. ಅಂದ. ಹಾಗಿದ್ದರೆ ಫಾದರ್ ಅಂತ ನಿನ್ನ ಭಾವನೆ ಇದೆಯಲ್ಲಾ ನಾನೂ ಫಾದರ್ ಆಗೇ ನಿನಗೆ ಕೆಲವು ಮಾತು ಹೇಳ್ತೀನಿ. ಪ್ರಾಣ ಗೀಣ ಕಳೆದುಕೊಳ್ಳಲು ಹೋಗಬೇಡ, ನಿನ್ನ ಮೇಲೆ ನಾನು ಪೋಲೀಸರಿಗೆ ತಿಳಿಸೋಲ್ಲ. ಅದರ ಬದಲಿಗೆ ನೀನು ಇದನ್ನ ಛಾಲೆಂಜ್ ಅಂತ ತಗೋಬೇಕು,ಮೋಸ ಮಾಡಿದವರಿಗೆ ನೀನು ಪಾಠ ಕಲಿಸಬೇಕು...ನನ್ನ ದುಡ್ಡು ನಿಧಾನಕ್ಕೆ ತಿಂಗಳಾ ತಿಂಗಳಾ ಕೊಡು ಪರವಾಗಿಲ್ಲ, ಆದರೆ ಇನ್ನೊಬ್ಬರಿಗೆ ಹೀಗೆ ಮಾಡಬಾರದು ನೀನು, ಬೆಳೆಯೋ ಹುಡುಗ ನೀನು, ಮುಂದೆ ಇನ್ನೂ ದೊಡ್ಡದಾಗಿ ಬೆಳೀಬೇಕು. ಹಾಗೆ ನಿಮ್ಮ ಮನೆಯವರು ನಿನ್ನ ಮೇಲೆ ಭರವಸೆ ಇಟ್ಟಿರ್ತಾರೆ. ಅದನ್ನ ಯಾವತ್ತೂ ಮರೀಬಾರದು...ಹೀಗೆ ಒಂದು ಗಂಟೆ ಉಪದೇಶ ಮಾಡಿದೆ. ಅವನಲ್ಲಿ ಧೈರ್ಯ ತುಂಬಿದೆ.

ಈ ಸಂಗತಿ ನಡೆದು ಈಗಾಗಲೇ ಹತ್ತಿರ ಹತ್ತಿರ ವರ್ಷವಾಗುತ್ತಾ ಬಂತು. ನಿನ್ನೆ ನನ್ನ ದುಡ್ಡು ಪೂರ್ತಿ ಬಂತು....

ಮುದುಕರು ದೊಡ್ಡವರೋ ಹುಡುಗ ದೊಡ್ಡತನ ತೋರಿಸಿದನೋ ಅನ್ನುವ ಸಂದಿಗ್ಧದಲ್ಲಿ ನಾನು ತೊಳಲಾಡುತ್ತಿದ್ದೇನೆ!

✵

**ಶ್ರೀಮಂತಿಕೆಯೇ ಸುಖದ ಮೂಲವಲ್ಲ. ಸುಖ ಎನ್ನುವುದು ಒಂದು ಮಾನಸಿಕ ಅವಸ್ಥೆ ಎಂದು ಶ್ರೀಮಂತರೊಬ್ಬರು ವೇದಿಕೆಯ ಮೇಲಿಂದ ಭಾಷಣ ಬೀಗುತ್ತಿದ್ದರು.**

**ಹಾಗಿದ್ರೆ ನಿಮ್ಮ ಹತ್ತಿರ ಇರುವ ಹಣ ನಮಗೆ ಕೊಟ್ಟುಬಿಡಿ ಅಂತ ಕೊನೆಸಾಲಿನಿಂದ ಕೋರಿಕೆ ಕೇಳಿತು.**